ಸುರಚಿರಪುಷ್ಕರಾಕರ ಜಲಾಂತರಮಗ್ನ ಕರೀಂದ್ರ ರುಂದ್ರ ಪು |
ಷ್ಕರಮದು ಪುಷ್ಕರಂಬೊಲಿರೆ ತದ್ಭ್ರಮೆಯಿಂದಳಿ ಪಾಯೆ ಪೊಣ್ಮೆ ಫೂ||
ತ್ಕರಿಸ ಸಿಡಿಲ್ದ ಸೀರ್ಪನಿಗಳೊಪ್ಪಿರೆ ಧೂಮದ ವೋಲ್ವಿರಾಜಿಸಿ |
ತ್ತರರೆ ಶುಪಾಕದಿಂ ನೆಗೆವ ಗುಂಡಿನ ವೋಲ್ಝಷಕೇತುವೀರನಾ || ೬೯

ಕಂ|| ಕರಿ ಮುರಿಯೆ ನಳಿನಮಂ ಪಂ |
ಕರುಹಾಕರದೊಳ್ಮದಾಳಿ ರವಿಗವಿದಿಡುವಂ ||
ತಿರೆ ವೊರೆದು ನೆಗೆಯೆ ಶಕ್ಸರ |
ಮಿರದಳ್ವಂ ತೂರ್ವಿ ರವದಿನೇಂ ರಂಜಿಸಿತೋ || ೭೦

ಬವರಂಗೈದ ಗಜಂಗಳ |
ನಿವಹಟ ನಿಗ್ಗವಮದುಡಿದು ಸೂಸಿರೆ ನೆಲದೊಳ್ ||
ತವೆ ಪಸಿದಪಲ್ಲಮರಿಗ |
ಳ್ತವಕದೆ ಬಿಸವೆಂದು ತುಡುಕುಗುಂ ತದ್ವನದೊಳ್ || ೭೧

ಒಡವರ್ಪ್ಪದು ಕಡೆವೋಪುದು |
ನಡೆಸೋಳ್ಪುದು ಪಿಂದೆ ನಿಲ್ಸುದತ್ತಿತ್ತಂ ಕೈ ||
ದುಡುಕುವು ದಂತಿಂತೊಲೆವುದು |
ಪಿಡಿಗೆ ಮುದಂ ಬಡೆದುದೊಂದು ಕಳಭಂ ಬನದೊಳ್ || ೭೨

ವಚನ|| ಮತ್ತೊಂದು ಮಳಯಜ ಮಹೀಜದಲ್ಲಿ —

ವೃ||ಮರಗೊಂಬಂ ಮುರಿವಲ್ಲಿ ತಳ್ತು ಮರವಾವೊಂದಾತ್ಮ ಶುಂಡಾಗ್ರದೊ|
ಳ್ಭರದಿಂ ಪೊಕ್ಕೊಡೆ ಬೀಸಿಫೂತ್ಕರಿಸಿ ಕೊಂಬಂ ಪುಷ್ಕರಾಗ್ರಕ್ಕೆ ಸಂ ||
ಕರಿಪಂತಿಟ್ಟು ಕುಸುಂಗಿ ಬಲ್ಪಳಿದು ಘೀಳಿಟ್ಟಳ್ಕಿ ಬಾಯ್ಬಿಟ್ಟು ಶೋ |
ಕರಸಂ ದಾಳ್ದುದಿಭಂ ವೃಥಾನ್ಯ ಪರಿಭಂಗಂ ಭಂಗಮಂ ಸಾರ್ಚ್ಚದೇ || ೭೩

---

ಕಂಮೆಸೆದತ್ತು ತಳ್ತ ಸರಿಯಿಂ ದರಿಯಿಂ ಜರಿಯಿಂ ಮೃಗಂಗಳಿಂ |
ತರತರಮಾಗಿ ತೋರ್ಪ್ಪಮರದಿಂ ಸೆರದಿಂಸೆರೆದಿಂಬು ಗೊಂಡ ಭೀ ||
ಕರತರ ಲುಬ್ಧಕ ಪ್ರಕರದಿಂ ಝರದಿಂ ಪರಿದಿಂಪ ನಾಳ್ದಭಾ |
ಸುರ ನದಿಯಿಂ ಪೊದಳ್ದಮರೆಯಿಂ ಹರಿಯಿಂ ಕರಿಯಿಂದೆ ಕಾನನಂ || ೭೪

ವಚನ|| ಮತ್ತಮಾವನಂ ಘನಾಗಮದಂತೆ ಘನಕದಂಬ ಮುಕ್ತಕವಿ ಲಸಿತಮುಂ ವಸುದೇವ ಭವನದಂತೆ ನಿರುದ್ಧ ಬಲ ಕೃಷ್ಣ ಸಾರಸಮುಚಿತಮುಂ ದಾನಧಾರೆಯಂತೆ ಪುಂಡರೀಕ ಗಂಡಕ ಮಂಡಿತಮುಂ ಯುಧಿಷ್ಠಿರ ಸದ್ಮದಂತೆ ವೃಕೋದರ ವಿಲಸ ದರ್ಜುನ ನಕುಲಾಧಿಷ್ಠಿತಮಂ ಸುಜನ ಹೃದಯದಂತ ನೇಕಪರಿಪೂರ್ಣ ಗುಣ ಸಮನ್ವಿತಮುಂ ಕೌಜಾತಿ

ಸಮೃದ್ಧವಾಗಿಯುಂ ದ್ವಿಜಾತಿ ಮನೋಜ್ಞಮುಂ ಪರಿಗತ ಶಬರೋಪಯುಕ್ತವಾಗಿಯು ಮವಿಗ್ರಹ ಸಮಗ್ರಸ್ಥಳಮುಂ ದ್ವಿಪ ವಿಲಸಿತವಾಗಿಯು ಮಗಣಿತ ವಜ್ರೋಪರಂಜಿತಮುಂ ವಿಶಶಕರಾರ್ಕೋಪ ಲಕ್ಷಿತವಾಗಿಯುಂ ಬಹುಲತಾ ರಾರಾಜಿತಮುಂ ತತ್ತತ್ತಾಪಸಮುಚ್ಚಯ ವಾಗಿಯು ಮಶೋಕ ಸಂಗತ ಮುಮೆನಿಸಿ ದುದಂತುಮಲ್ಲದೆ—

ವೃ|| ಹರಿಣೀಮತ್ತೇಭ ವಿಕ್ರೀಡಿತ ಲಲಿತಮಯೂರಾನ್ವಿತಂ ಛಂದಮಂ ಶಂ
ಬರ ಭಾಸ್ವತ್ಪುಂಡರೀಕ ಸ್ಫುರಿತ ಹರಿ ಮರುದ್ವ್ಯಾಘ್ರಜಿತಂ ವಾರ್ಧಿಯಂ ಬಂ ||
ಧುರ ಭಾರದ್ವಾಜ ಶಾಂಡಿಲ್ಯಕ ಶುಕ ವಿಮದಾಗಸ್ತ್ಯಕಂ ತಾಪಸ ಪ್ರೋ |
ತ್ಕರಮಂಸೋಮಾರ್ಕಯುಕ್ತ್ಯಂಚಿತಮದುನಭವಂಪೋಲ್ತು ಚೆಲ್ವಾಯ್ತರಣ್ಯಂ||

ವೃ|| ಪರತರು ವಲ್ಲರೀಪ್ರಕರದಿಂ ಕರದಿಂ ಕರೆದಿಂಬುವೆತ್ತು ಸಂ |
ಚರಿಸುವ ಕಿನ್ನರಪ್ರಸರದಿಂ ಸರದಿಂ ಸರದಿಂದುಕಾಂತಿ ನಿ ||
ರ್ಝರ ಸಲಿಲಂಗಳಿಂ ಬದರಿಯಿಂ ದರಿಯಿಂ ದರಿಯಿಂದಗಲ್ದ ನಿಂ |
ದು ರುಮುನಿವೃಂದದಿಂದೆ ಹರಿಯಿಂ ಹರಿಯಿಂ ಹರಿಯಿಂದದೊಪ್ಪುಗುಂ|| ೭೬

ವಚನ || ಸಂತತ ಮಿಂತೊಪ್ಪುವಾ ಕಾಂತಾರಾಂತರಾಳದಲ್ಲಿ—

ವೃ|| ಪಡಿನೆಳಲಂ ಮೃಗೇಂದ್ರನುರೆ ಚಂದ್ರಶಿಲಾತಳದಲ್ಲಿ ಕಂಡು ಕಾ |
ಯ್ಪಡರಲಿದಿರ್ಚ್ಚ ಮತ್ತದು ಮಿದಿರ್ಚ್ಚರೆ ಗರ್ಜಿಸೆ ಮೇಘನಾದದಿಂ ||
ದೊಡನದು ಗರ್ಜಿಸುತ್ತಿರೆ ಪಳಂಚಿ ವಿಲಂಘಿಸಿ ಪಾಯ್ದು ಪೊಯ್ದು ತಾಂ |
ಮಡಿದುದು ಶುದ್ಧರಲ್ಲಿ ನಿಜದೋಷಮ ನೊಂದಿಸೆ ಕೆಟ್ಟುಪೋಗರೇ || ೭೭

ಮೊಳೆವುಲ್ಲಂ ಮೇದು ಮಧ್ಯಂದಿನದ ಬಿರುವಿಸಿಲ್ಗಾಗೆ ಬೆನ್ನಂ ಭರಂಗೊಂ |
ಡೆಳಸುತ್ತುಂ ಪಲ್ವಲಾಂಭಃ ಪ್ಲವದೆ ಮುಳುಗಿ ತತ್ಕರ್ದಮಂ ಪತ್ತೆನಿಂದ||[ಸ್ವಂ
ವ್ವಳಿಸುತ್ತೊಂದೊಂದ ರೊಳ್ಕೋಡಿಡುತೆಮಗುಳ್ದು ಮೆಲ್ಕಾಡುತಂ ಕಾಡೊಳೊ
ದಳೆದಿರ್ದ್ದತ್ತ ಭೃಕಾಯುಂ ಪೃಥುಮಹಿಷ ನಿಕಾಯುಂ ಕರಂಪ್ರೋತ್ಸುಕಾಯಂ ||

ಕಡುಪಸಿವೆತ್ತು ಪುತ್ತಿ ನೆಡೆಯೊಳ್ಮಗ ಮಿಕ್ಕು ತಿರುಂಪೆಗೆಂದು ಮ |
ತ್ತೆಡೆವಿಡ ದೂದು ತಿರ್ಪ್ಪಿನ ಮದೊಂದು ಮಹೋರಗ ಮಾನನಾಗ್ರಮಂ ||
ಪಿಡಿದಡರ್ದಲ್ಲಿ ಸೇಲುತಿರೆ ಸುಂಡಿಲವೋಲ್ದೊರೆ ಪಾಯೆ ಪಲ್ಗಳಂ |
ತೊಡನೆಸೆದತ್ತು ಬಲ್ಗರಡಿ ಕಾನನದೊಳ್ಕರಿಪೋತದಂತೆ ವೋಲ್ || ೭೯

ಕಂ|| ಮಿಡಿವಿಲ್ವಿಡಿದು ಪುಳಿಂದಿಯ |
ರಿಡೆ ಗಜಮೌಕ್ತಿಕದ ಮಿಂಟೆಯುಂಬರ ದೆಡೆಯೊ ||
ಳ್ಪಡೆದು ಪಗಲು ಮೀಳ್ವವೊ |
ಲೊಡನೆ ಸೆದುದು ಮೃಗದ ಕೇಡನರಿಪಲ್ಬನದೊಳ್ || ೮೦

ವಚನ|| ಇಂತಸದಳ ಮೆಸೆವಾ ಪೇರಡವಿಯಂ ಬೇಂಟೆಯಾಡಲೆಂದು ಬಿಯದರ್ಸ್ಗಂಡ
ಣೆಸಿ ಪೊಕ್ಕು ಮಿಗೆ ಸಂಭ್ರಮಿಸಿ ಸರುಮಿಡಿದು ಹಣೆ ಯಿಪ್ಪೆಡೆಗೈತಂದು—

ವೃ|| ಇದುಕರಿಪೋದ ತಾಣವಿದು ಸೈರಿಭನೈದಿದ ದಾರಿ ಸೋಳ್ಪೊಡಿಂ |
ತಿದು ಪುಲಿಯಿರ್ದ್ದ ಬಲ್ಮೆಳೆ ಯಿದೆ ಕ್ಕಲನೇಳ್ವಡಿ ಯಿಟ್ಟಬಟ್ಟೆ ನೋ ||
ಡಿದು ಹರಿ ಸಿಂದಪಜ್ಜೆ ಯಿದೆ ಪೊಕ್ಕಮದಾಂಬು ವಿದಾಸ್ಯ ಫೇನಮಿಂ |
ತಿದೆ ತನಿಗಬ್ಬ ತಳ್ತಿದೆ ಕೆಸಪ್ಪರಿಗೊಂಡಿದೆ ಹಸ್ತಿಮೌಕ್ತಿಕಂ || ೮೧

ವಚನ|| ಎಂದು ಕುರುಪುಗೊಂಡ ನುಮಿಸುತ್ತ ಮತ್ತ ಮಾಣದೆ—

ವೃ|| ಮರಗೊಂಬಂ ಪರಿದೇರಿ ನೋಳ್ಪ ಮೆಳೆಯಿಂದಂ ಸೋವುತಲ್ಲಲ್ಲಿ ಬೇ |
ಹರಿಸುತ್ತುಂ ಪೊದರಿಂ ತೆರಳ್ದು ಪಡಿಗಂಡಾರೈವ ನೀಡಾರ್ದ್ದಣ ದೋ ||
ವರಿಯೊಳಕ್ಕಿವ ಕಡಂಗಿ ಕಂಡು ಮಿಗಮಂ ಬೆಂಕೊಂಬ ಬೇಡರ್ನರೇ |
ಶ್ವರ ಕೇಳ್ವಬ್ಬರದ ರಣ್ಯದೊಳ್ಪರಿದ ರೇನೆಂಬೆಂ ತದಾಟೋಪಮಂ || ೮೨

ಸರಳಿಪ ಪುಲ್ಲೆ ಯೋಡುವ ಮೊಲಂ ಬಿಡದಾಲಿಪ ಹಸ್ತಿ ನಿಲ್ವ ಸೂ |
ಕರ ನಡಿಗೊಳ್ವ ಪೆರ್ಮರೆ ಯಡಂಗುವ ಪೆಬ್ಬುಲಿ ಪಾರ್ವಪಕ್ಷಿಗಳ್ |
ಕೊರಗುವ ಖಡ್ಗಿ ಲಂಘಿಪವೃಕಂ ಮುರಿದೇಳ್ವ ಮೃಗೇಂದ್ರ ನೆತ್ತಲುಂ |
ನೆರೆದಿರೆ ಕಾಡೊಳುಣ್ಮಿದುದು ಬೇಡರ ಬೇಂಟೆಯ ವಾದ್ಯದಬ್ಬರಂ || ೮೩

ನಡೆ ಬಿಡು ನಾಯ್ಗಳಂ ತುಡು ಸರಲ್ಗಳ ನೊದ್ದಿಸು ಸುತ್ತು ಪತ್ತು ಬೊ|
ಬ್ಬಿಡು ಬಡಿಕೋಲ್ಗಳಿಂದಿಡು ಮೊಲಂಗಳ ನೇಳ್ಪಲೆವೀಸಿ ಪುಲ್ಲೆಯಂ ||
ಕೆಡಪು ಕಡಂಗಿ ಪೊಯ್ಪುಲಿಯ ನಿಟ್ಟೆಯೊಳಾಂತಿಡು ಪಂದಿಯಂ ಪಡ |
ಲ್ವಿಡಿಸು ಗಜಂಗಳಂ ಕುಳಿಯೊಳೆಂಬರವಂ ಪಿರಿದಾಯ್ತರಣ್ಯದೊಳ್ || ೮೪

ವಚನ|| ಆಗಳಲ್ಲಿ ಪೆರತೊಂದು ತಾಣದಲ್ಲಿ—

ವೃ|| ಚಮರಿ ಮಿಗಕ್ಕೆ ಸುಣ್ಣುಗುರುಳ ನಗ್ಗದಹಸ್ತಿಗೆ ನೀಳ್ದಹಸ್ತಮಂ |
ಕವಲಿರಿದಿರ್ದ್ದ ಕೊಂಬಿನ ಮೃಗವ್ರಜ ಕಿರ್ಬ್ಬರಲಂ ದ್ವಿಪಾರಿ ಗು ||
ಣ್ಮುವರಸನಾಗ್ರಮಂ ಪುಲಿಗೆ ಕೈಯೆರಡಂ ನಿಮಿರ್ದೆತ್ತಿ ಪಂದಿಗೊ |
ಪ್ಪುವ ಮೊಳಕೈಯ ತೋರ್ಪ್ಪರರೆಬಬ್ಬಿಯದ ಸ್ಸಲೆ ಸನ್ನೆ ವೇಂಟೆಯೊಳ್||

ವಚನ|| ಆಗಳವರೊ ಳೊರ್ಪ್ಪ ಪುಳಿಂದಂ ತನ್ನ ಪೆಸರ ಪೇರಡಿಯ ಹಾಸಮಂ ಕಳೆದು
ಮೈದಡವಿ ಕೈಚಿಟುಂಕು ಗೈದು ಪುಲ್ಲೆಯಂ ತೋರಿ ಬಿಡಲೊಡನೆ—

ಕಂ|| ಜೆದರ್ವ್ಮನಂ ಬೆಚ್ಚುರ್ವ ಕ |
ಣ್ಣದಿರ್ವಂಗಂ ನಟ್ಟಕಿವಿಗೆ ಳೊಡನೊಡ ಸಿಳಿವ ||
ಗ್ಗದ ಸುಯ್ಪೊಪ್ಪುವ್ವಳ್ಳೆ ಪೊದ |
ಳ್ದೊದವೆ ಜವಂಗುಂದ ದೆರಳೆ ಸರಳಿಸಿತಾಗಳ್ || ೮೬

ನೆಗೆದ ಕುಡಿವಾಲ ಮುಣ್ಮುವ |
ಬಗೆ ಬಳ್ಕುವ ನಡು ವಗುರ್ವ್ವಿಷಾನನ ಮಿರೆ ಕ ||
ನ್ಮೃಗವಂ ಬಳಿವಿಡಿದಟ್ಟು |
ತ್ತ ಗೆಲದೆ ಪಿಡಿದತ್ತು ಜಾಯಿಲಂ ತದ್ವನದೊಳ್ || ೮೭

ವಚನ|| ಅಲ್ಲಿ ಕೆಲಂಬ ಕ್ಕಿರಾತೆಯು ನ್ನೆರೆದು—

ಕಂ|| ವದನಾಬ್ಜ ವಿರೋಧಿಯ ನಾ |
ಜಿದುವಂ ಕೆಳೆಗೊಂಡುದಲ್ಲದೆ ಮ್ಮೀಕ್ಷಣ ದಂ ||
ದದ ಕಣ್ಣುಂಟೆಮು ಗೆಂದಿ |
ರ್ಪ್ಪದಿ ದೆಂದಿಸುವಂತೆ ಪುಲ್ಲೆಯಂ ಪದೆದೆಚ್ಚರ್ || ೮೮

ವಚನ|| ಅದಲ್ಲದೆಯುಂ—

ವೃ|| ಕಿಡಿಪುಟ್ಟುತ್ತಿರೆ ದಾಡೆಯಂ ಮಸೆದು ಕಿಗ್ಗಣ್ಣಿಕ್ಕಿ ನೋಡುತ್ತೆ ಮ್ಯ |
ಗೊಡವುತ್ತ ಬ್ಬರ ಮಾಲಿಸುತ್ತೆ ಮೊಗಮಂ ತೂಗುತ್ತೆ ವಾಲಾಗ್ರಮಂ ||
ಮಿಡು ಕುತ್ತುಬ್ಬರಿಸುತ್ತೆ ರೋಮಚಯಮಂ ಮೀಂಟುತ್ತೆ ಕಂಡಂಗಳಂ |
ಕೆಡುವುತ್ತಂ ಗದೊಳುರ್ದ್ವಿ ಬಲ್ಮರಗಳಂ ಬಂದತ್ತ ದೊಂದೆಕ್ಕಲಂ || ೮೯

ವಚನ|| ಅಗಳ್—

ವೃ|| ಪೋಗದಿರೆಂದು ಗರ್ಜಿಪ ಕಿರಾತನ ಮಾತದು ತನ್ನ ಕರ್ಣಮಂ |
ತಾಗದಮುನ್ನಮುಣ್ಮೆ ಕಿಡಿ ಕಣ್ಗಡೆಯೊಳ್ಕಿಡಿ ದಾಡೆಗಟ್ಟಿ ತಾಂ ||
ತಾಗಲಿದಿರ್ಚ್ಚಿ ಕೋಡುಡಿದಕಾಲನ ಸ್ಯೈರಿಭದಂತೆ ಒಪ್ಪಿರ್ಸಂ |
ತೂಗಿ ಕರಾಗ್ರದಿಂದೆ ಪೊಳೆವಿಟ್ಟಿಯೊಳಿಟ್ಟನದಂ ವನೇಚರಂ || ೯೦

ಕಂ|| ಇಡೆ ಪಣೆಯನಡಸಿ ಕಂದಮು |
ನೊಡೆದುಚ್ಚಳಸಿರೆ ಸರೋಷಮತಿ ಮುಗುಳ್ದಿದಿರಂ ||
ನಡೆದದರಣಸಿನ ಮೊನೆಯಿಂ |
ದೊಡಸಿಕ್ಕಿತು ಪಾಯ್ದು ಪಂದಿಯವನಂ ವನದೊಳ್ || ೯೧

ವೃ|| ಕುಸಿದಪರಾಂಗಮುಜ್ಜ್ವಳಿತಪಿಂಗಳಲೋಚನಮುಗ್ರದಂಷ್ಟ್ರಮಾ |
ರ್ಪ್ಪಸೆವಮನಂ ಧರಿತ್ರಿಯೊಳೆ ಚಾಲಿಪಜಾಲಮುಗುರ್ವ್ವಿಪಾಸನಂ ||

ನಸುನೆಗೆದಿರ್ದ್ದತೋೞ್ರತಲೆ ಮುಂಗಡೆ ಸಾರ್ಚ್ಚಿದಕಾಲರಲ್ದಮೂ |
ಗೆಸೆಯೆ ತರಕ್ಷು ದಂಶಶತಸಂವೃತಮಿರ್ದ್ದುದದೊಂದುತಾಣದೊಳ್ || ೯೨

ವಚನ|| ಇಂತತಿಭಯಾವಹಮಾಗಿತೋರ್ಪ್ಪ—

ವೃ|| ಪುಲಿ ಪೊರಮಟ್ಟು ಕಟ್ಟಿದಿರೊಳಬ್ಬರಿಸುತ್ತಿರೆ ಬೊಬ್ಬೆಗೊಟ್ಟು ಗಂ |
ಡುಲಿವೆರಸುತ್ತೆ ಪತ್ತಿ ಜಡಿದಾಯುಧದಿಂ ಪೊಡೆದಿಕ್ಕಿ ಮಿಕ್ಕು ನಿ ||
ಷ್ಖಲನೆನಿಸುತ್ತೆ ನಿಂದಿರೆ ಪುಳಿಂದನನಪ್ಪಿದಳಾಗಳಾತನಾ |
ಲಲನೆ ತದೀಯದಕ್ಷಿಣಭುಜಾಗ್ರಮನಾ ಜಯಲಕ್ಷ್ಮಿಯೆಂಬಿನಂ || ೯೩

ವಚನ|| ಮತ್ತಮೊಂದೆಡೆಯಲ್ಲಿ—

ವೃ|| ಮೆಳೆಯೊಳಗಿರ್ದ್ದಮೇವಮಿಗೆಮಂಮಿಗೆಪೆಬ್ಬುಲಿಕಂಡುಕಾಣದಂ|
ತಳವಿಗೆ ತಗ್ಗಿ ಕುಗ್ಗಿತುಸಿರಿಕ್ಕದೆ ಬಂದು ಹಣುಂಗಿ ಪಾರ್ವತ |
ನ್ನಳವನಭೀಕ್ಷಿಸುತ್ತೆ ಸಲೆ ಗರ್ಜಿಸಿ ಕಾಯ್ದು ಕಡಂಗಿ ಪಾಯ್ದು ಪೊ ||
ಯ್ದಳೆಗಿರದಿಕ್ಕಿ ಘುರ್ಘುರಿತಕಂಠಮುದೀಂಟಿತು ರಕ್ತವಾರಿಯಂ || ೯೪

ವಚನ || ಅದಲ್ಲದೆಯುಂ—

ವೃ|| ಕಟ್ಟಿದಿರಲ್ಲಿ ಗರ್ಜಿಸೆ ತರಕ್ಷುತರಂ ತರಳಾಯತಾಕ್ಷಿ ಕಂ |
ಗೆಟ್ಟ ಮದರ್ಪ್ಪ ಲಂಜದಿರೆಸುತ್ತವಳಂ ಬಿಗಿದಪ್ಪುತಿರ್ಪ್ಪನಂ ||
ತೊಟ್ಟನೆ ಪಾಯೆ ಪಜ್ಜೆ ಯಿಡದಲ್ಲಿಯೆ ನಿಂದು ಕಡಂಗಿ ಖಡ್ಗದಿಂ |
ದಟ್ಟಿ ನೆಲಕ್ಕೆ ಬೀಳ್ಕೆನಮುದಂ ಸದೆದಂ ಶಬರಾಧಿನಾಯಕಂ || ೯೫

ವಚನ|| ಅಲ್ಲಿ ಮತ್ತೊರ್ವ ನೆಳೆ ಜೌವನದ ಪುಳಿಂದಂ—

ಕಂ|| ಮುನಿದಿ ರ್ದ್ದನಿಯ ಳ್ಪುಲಿ ಗ |
ರ್ಜನೆಗುಡೆ ಭಯಮುತ್ತು ಕೊರಲ ನಮದರ್ಪ್ಪಿರೆ ತೊ ||
ಟ್ಟನೆ ಬಿಟ್ಟಂಬದ ನುರ್ಚ್ಚಿರೆ |
ಮನದೊಳ್ಮುದಮುಂ ವಿಷಾದಮುಂ ಕೈಕೊಂಡಂ || ೯೬

ವಚನ|| ಮತ್ತಮೊರ್ವ್ವಂ—

ಕಂ|| ಎಳವೇಡಿತಿಯ ಕುಚಂಗ |
ಳ್ಬಳೆಯೆ ಬಳಂಗುಂದಿ ಮಾರ್ಣ್ದನೆಂಬೀ ನೆವಮುಂ ||
ತಳೆದವನೆ ಪೋಲ್ತ ಕುಂಭಂ |
ಗಳ ನಾಂ ತಾನೆಗಳ ನೈದಿ ಕೊಲ್ಲಂ ಭಿಲ್ಲಂ || ೯೭

ವೃ||ಬಲಗಾಲ್ಪಿಂದೆಸೆಗಾಗೆ ವಾಮಪದಮಂ ಮುಂದಿಟ್ಟು ದೋರ್ಮೂಲಮ
ಮೊಲೆಯುಗ್ರಂ ತಲೆದೋರೆ ತೆಳ್ನಡು ಬಳುಂಕಲ್ಕುಣ್ಗ್ಣರಲ್ಕೊಂಕೆ ಕೋ ||
ಮಲೆ ನಿಂದಂಬಕ ದಗ್ರಮಂಬುದುದಿ ಲಕ್ಷ್ಯಂ ಮುಟ್ಟಿಯೊಂದಾಗೆ ತೋಂ||
ಳ್ವಲವಮಂ ತೋರಲೊಡಚ್ಚುರ್ತೆಚ್ಚಳಿನಿಯಂಭಾಪೆಂಬಿನಂ ದ್ವೀಪಿಯಂ || ೯೮

ಪೊದರಿಂದಂ ಪೊರಮಟ್ಟು ಕಟ್ಟಿದಿರೊಳಾರ್ಪಿಂ ಗರ್ಜಿಸುತ್ತಿರ್ಪ ಬ|
ಗ್ಗದ ಬಲ್ಗಂಡಿಕೆ ಗಂಡು ಗಂಡುಗಲಿ ಬೇಡಂ ದಂಡೆಯಂ ಕೊಂಡು ನಿಂ ||
ದಿದಿರೊಳ್ಪಾಯ್ದ ದಕಿತ್ತು ಕೈಮುರಿಗೆಯಂ ಕೈಗಣ್ಮಿ ಪೊಕ್ಕೆತ್ತಿ ಖ |
ಡ್ಗದೆ ಬೆನ್ಕೊಳ್ಮೆನೆದೋರೆ ಮೀರಿ ತಿವಿದಂ ತತ್ಕಾಳ ಮೇಘಾಹ್ವಯಂ||೯೯

ತೆಗೆ ನೆಗೆ ದರ್ಧಚಂದ್ರಶರದಿಂ ಶಬರಂ ಕರಿಕಂಠಮೂಲಮಂ |
ಬಗಿದಿಸೆ ರಕ್ತಸಿಕ್ತಮದು ಮೌಕ್ತಿಕ ಮೊಂದಮದೊರ್ಪ್ಪೆ ನೆತ್ತಿಯೊಳ್ ||
ನೆಗೆದೆಸೆದತ್ತು ಪಶ್ಚಿಮ ನಗಾಗ್ರದೊಳೊಂದಿರೆ ಸಂಜೆಗೆಂಪು ತ |
ಳ್ತೊಗೆದ ಕುಜಪ್ರಯುಕ್ತ ಮೃಗಲಾಂಛನ ಲೇಖೆಯಿದೆಂಬ ಮಾಳ್ಕೆಯಿಂ||೧೦೦

ವಚನ|| ಅದಲ್ಲದೆ ಪೆರತೊಂದು ಪಥಪ್ರದೇಶದಲ್ಲಿ—

ವೃ|| ಸುಸಿಲೆಸಗುತ್ತೆ ಸೇಗ್ಗೆದಳೆದಾಗಳೆ ಭಿಲ್ಲಿಯುಮಲ್ಲಿ ಭಿಲ್ಲನುಂ |
ಪೊಸ ಪಿಡಿಗೂಡಲೆಂದು ನಡೆತಂದ ಮದೇಭದ ಕುಂಭಮೌಕ್ತಿಕ ||
ಪ್ರಸರದ ಲೋಭದಿಂದಿಸ ಲೆರಳ್ಬರಿಯೊಳ್ಗರಿಯಂಬು ತುಂಬೆ ಕ |
ಣ್ಗೆಸೆದು ದದುಣ್ಮಿದೊಳ್ಗರಿಗಳಂ ತಳೆದಂಜನ ಶೈಲಮೆಂಬಿನಂ || ೧೦೧

ವಚನ|| ಅಲ್ಲಿ ಪೆರತೊಂದೆಡೆಯೊಳ್—

ವೃ|| ಕರಿ ನೀಲಾಚಲದಗ್ರದೊಳ್ಕರೆಯೆ ಬಲ್ಪಿಂ ಕಾಲಮೇಘಂ ಶರೋ |
ತ್ಕರಮಂ ಗರ್ಜಿಸಿ ಜಿಷ್ಣುಚಾಪಮನವಂ ಕೈಕೊಂಡು ತದ್ಘಾತುನಿ ||
ರ್ಝರಮಾಗಳ್ಪರವಂತೆ ರಕ್ತರಸಪೂರಂ ಸೂಸೆ ಮತ್ತಲ್ಲಿ ಸೀ |
ಕರಮೆತ್ತಂ ಸಿಡಿವಂತೆ ತಳ್ತು ಸಿಡಿದತ್ತಾರಕ್ತ ಮುಕ್ತಾಫಳಂ || ೧೦೨

ಪಸಲೆಗೆ ಬಂದಪುಲ್ಲೆಯನೆರೆಳ್ದಿಸೆಯೊಳ್ಕಿರುವೇಡರಿರ್ವರಾ |
ದ್ದಿರ್ಸೆ ಸರಿಸಕ್ಕೆ ನಿಂದು ನೆಗೆದತ್ತದು ಸತ್ವರಮಾಗಸಕ್ಕೆ ಬೆ ||
ಕ್ಕಸಮೆನೆ ತಳ್ತು ಪಾಯ್ವ ಕಣೆಗಳ್ಕೊರೆದಿಕ್ಕಿ ದುರ್ವರಂ ನಿರೀ |
ಕ್ಷಿಸೆ ಪರನಿರ್ನಿಮಿತ್ತ ಹನನೋದ್ಯಮ ಮಾತ್ಮವಿನಾಶ ಕಾರಣಂ || ೧೦೩

ಎಲೆವೆರೆಯಲ್ಲಿ ಪೂದಿರಿಯಲೆಂದಿರೆ ನಿಂದು ಪುಳಿಂದಿ ಕಂಡು ಬ |
ಲ್ಕೊಲೆಯ ನದೊರ್ವ್ವ ಬಾಲಶಬರಂ ಕರಿಕುಂಭಮಿದೆಂದು ಬಾಣಮಂ ||

ನಲಿದಿಸೆ ಮಧ್ಯದೊಳ್ಪೊಡೆ ಯಲಂತದ ನಾಕ್ಷಣಮೆಳ್ದ ಸಿಂಹಮಂ |
ತಲೆಗಡಿದಲ್ಲಿ ಬಿಳ್ದುದೆನೆ ಸದ್ವಿಧಿಯುಕ್ತರ ನಾರೊ ಕೊಂದಪರ್ || ೧೦೪

ನಸೆ ಮಸಪೊಂದೆ ಸುಣ್ಬಸಲೆಯೊಳ್ಸಸಿಲಾಂತೆಸೆವೇಣನಂ ಏಲಂ |
ಬಿಸ ದಿಸಲೆಂದು ಬಂದನ ಪುಳಿಂದನ ವಕ್ಷಮ ಸುದ್ಗಮಾಸ್ತ್ರದಿಂ ||
ದಿಸೆ ಕುಸುಮಾಸ್ತ್ರನಾಪ್ಪರ್ಳಿದು ಕೂರ್ಪ್ಪಳ ಕೈವಿಡಿದೆಯ್ದೆ ಪಲ್ಲವ |
ಪ್ರಸರ ಸಮೇತಮಾದ ಮೆಳೆಯೊಳ್ಪೊಸ ಪೂವಸೆಯಲ್ಲಿ ಕೂಡಿದಂ || ೧೦೫

ಕಂ|| ಜಂಕದ ಶಂಖದ ಮೇಲಣ |
ಪಂಕಜರಿಪು ಬಿಂಬದಮೃತಫಳದಿನಿರಸಮಂ ||
ತಾಂ ಕುಡಿದು ಮಿಕ್ಕಮಧುರಸ |
ಮಂ ಕನಸಿನೊಳಾ ದೊಡಂಟಿ ನೋಡಂ ಬೇಡಂ || ೧೦೬

ವಚನ|| ಮತ್ತಮೊರ್ವ್ವಂ—

ವೃ|| ಕಾಡಲ ಗೊರ್ಂಜಲಂ ಮುರಿದುಸೋಮರ್ಡಿಗಿಟ್ಟುಮರಂದದೊಳ್ಪದು
ಗೂಡಿ ಕುರಂಗ ನಾಭಿಯನು ರೋಜಕೆ ಲೇಪಿಸಿ ಪಲ್ಲವಂಗಳಂ ||
ಜೋಡಿಸಿ ಕಟ್ಟಿ ಪೆರ್ಚಿದ ನಿತಂಬಕೆ ಸಾರ್ಚ್ಚಿ ಕರೀಂದ್ರ ಕುಂಭದೊ |
ಳ್ಮೂಡಿದ ಮುತ್ತನೆತ್ತಿ ಸರದಿಂ ಸರಗಟ್ಟಿ ಕೊರಳ್ಗೆ ಕೂರ್ಮೆಯಿಂ || ೧೦೭

ತುಡಿಸುತ್ತಂ ನಡೆನೋಡಿ ಗಾಡಿ ಮಿಗೆ ಬೇಡಂ ಬೇಡಿದೊಳ್ವಣ್ಣನಿ |
ತ್ತಡಿಯೊಳ್ಮಳ್ಮನೆ ನಾಂಟದಂತೆ ನಡೆಸುತ್ತಲ್ಲಲ್ಲಿ ಸಲ್ಲೀಲೆಯಿಂ ||
ದೊಡಗೂಡುತ್ತೆ ಮಡಲ್ವ ಪೆರ್ಮೆಳೆಗಳೊಳ್ಚೆಲ್ವಾದರಲ್ವಾಸಿನೊ |
ಳ್ಪಡೆದಂ ಸಂಮುದಮಂ ನಿಜಾಂಗ ಜಿತಚಂಚದ್ವಲ್ಲಿಯೊಳ್ಭಿಲ್ಲಿಯೊಳ್ ||೧೦೮

ವ|| ಅಲ್ಲಿ ಮತ್ತೊಂದೆಡೆಯೊಳ್ತಳಿರ್ತ್ತ ಶೋಕೆಯ ತಳಿದ ತಣ್ಣೆಳಲ ಪಳಿಕಿನಪಾಸರೆಯಲ್ಲಿ—

ವೃ|| ತೊಳಗುವ ದಂತದೋಲೆ ಸುಲಿಪಲ್ಮಳಿರೊಳ್ಪಡೆ ಹಸ್ತಿಮಸ್ತಕ |
ಸ್ಥಳ ದೆಳಮುತ್ತಿನೆಕ್ಕಸರ ಮಬ್ಜಪರಾಗದ ಬೊಟ್ಟು ಸೂಡಿದು ||
ತ್ಪಳದಳ ಮಾಲೆ ಗುಂಜಿದೊಡವೊಪ್ಪುವ ಪುಲ್ಗಳ ಕಂಕಣಂ ಕರಂ |
ಪೊಳೆವಲರ್ಗಣ್ಮುಗುಳ್ಮೊಲೆಗಳೊಪ್ಪೆ ಪುಳಿಂದಿಯ ರೊಪ್ಪಿತೋರಿದರ್ || ೧೦೯

ವಚನ|| ಮತ್ತಂ—

ವೃ|| ನೆಲೆಮೊಲೆಗಳ್ಕದಕ್ಕದಿಸೆ ತಾಳ್ದ ತಳಿಮ್ಮುರ್ಡಿಯಿಂದೆ ಸೂಸೆ ಕ |
ಣ್ಮಾಲ ಗರ್ಳಕಾಂತಿ ಸಂದಣಿಸೆ ನರ್ತಿಸುತಂತಿರೆ ದಂತದೋಲೆಗ ||
ಳ್ಗಲಕೆನೆ ಕೈಯನುಣ್ಬಳೆ ಪುಳಿಂದಿಯ ರಾದದೆ ನಿಂದು ಸುಮ್ಮ ಯು |
ಜ್ಜ್ವಲ ರವಮೊಪ್ಪಿರಲ್ಬಳಿಸಿದ ಬ್ಬಿರ್ದಿರಕ್ಕಿಯನಲ್ಲಿ ರಾಗದಿಂ || ೧೧೦

ವಚನ|| ಅವರೊಳೊರ್ವ್ವ ಕಿರುವೇಡಿತಿ—

ಕಂ|| ತಳಿರಂ ಸುತ್ತಿ ವನೇಚರಿ |
ವಿಳಾಸದಿಂ ಗಿರಿಸಿತಂಬ ದೊಳ್ಮತ್ತುಗಳಂ ||
ತಳೆದೆಸೆದ ಳಪರದಿಗ್ವಧು |
ತಳೆವಂತಿರೆ ಸಂಜೆವೆರಸಿ ತಾರಾಗಣಮಂ || ೧೧೧

ವಚನ|| ಪೆರತೊಂದೆಡೆಯೊಳ್—

ವೃ|| ಮುಡಿಯೊಳ್ಮಲ್ಲಿಯ ಸೂಡಿ ಗುಂಜಿದೊಡವಂ ಕೈಗೆಯ್ದು ಕಸ್ತೂರಿಯಂ
ತೊಡೆ ದುದ್ಯತ್ಕುಚ ಕುಂಭದೊಳ್ತಳಿರ್ಗಳಂ ತಾನುಟ್ಟು ಪಚ್ಚೋಲೆ ದಾ ||
ಳ್ದೊಡನಾಂತೊಳ್ಗರಿಯಂಬುಮಂ ಬಿದಿರಬಿಲ್ಲಂ ಬೇಡವೆಣ್ಬಂದು ನಿಂ |
ದೆಡೆ ಯೊಳ್ನಿಂದ ನನಂಗನಾಂತು ಮುಗುಳಂಬಂ ಪುಷ್ಪಕೋದಂಡಮಂ|| ೧೧೨

ವಚನ|| ಇಂತನಂತ ವಿಳಾಸದಿಂ ಪುಳಿಂದಸುಂದರಿಯ ರ್ವಿಹರಿಸುತ್ತುಮಿರೆ—

ವೃ|| ತಿವಿದು ಮೃಗಾರಿಯಂ ಸದೆದು ಬಲ್ಮರೆಯಂ ಪೊಡೆದಿಕ್ಕಿ ಸಿಂಹಮಂ |
ಕವಿದಿಸುತಾನೆಯಂ ತರಿದು ಸೈರಿಭಮಂ ಪರಿದಿಟ್ಟು ಪಂದಿಯುಂ ||
ತವಿಸಿ ವೃಕೌಘಮಂ ಬಡಿದು ಬಲ್ಮೊಲನಂ ಬಲೆಗಿಟ್ಟು ಪುಲ್ಲೆಯಂ |
ಬವರಿಗೊಳುತ್ತೆ ಬೇಡವಡೆಯಾಡಿದು ದಗ್ಗದ ಬೇಂಟೆಯಂ ನೃಪಾ || ೧೧೩

ವಚನ|| ಇಂತು ಬೇಂಟೆಯಾಡಿದ ನಂತರಂ—

ವೃ|| ಪೊಂಬುಲಿ ಸಮ್ಮಮಾನೆದಲೆ ಮುತ್ತು ಮೊಲಂಗಳ ಬಿಕ್ಕು ಪೂತಿವೆ |
ಕ್ಕಂಬರಗಾಳಿ ಜೇನ್ಪಣಿಸೆವಣ್ಪೊಸನಾಕ್ಕಿರ್ಡಿದಾಡೆ ನಿಗ್ಗವಂ ||
ಶಂಬರ ಮಿಂಬುವೆತ್ತ ಚಮರಂ ಜತು ಪೇರುಡು ಪೀಲಿಯೆಂಬಿವಂ |
ತುಂಬಿದ ಕಂಬಿಯಂ ತಳೆದಡೇಂ ತಳರ್ದತ್ತೊ ಪುಳಿಂದ ಸಂಕುಳಂ || ೧೧೪

ವಚನ|| ಇಂತು ಪನ್ನತಿಕೆಯಿಂ ಪಲವೇಂಟೆ ಯಾಡಿ ಕಾಡೊಡೆಯಂ ತೋಡಿಲ್ಲದ ತೊರೆವೇಂಟೆ ಯಾಡಲೆಳಸುತಿರೆಗೂಳಿ ಹಂಜರಗೂಳಿಡುಗಾಣಂ ಸೊಕ್ಕುಸಿಲ್ಕುರಿಲ್ಕಿರುಗೂಳಿಪೆರ್ಗೂಳಿ ಕೊಡಂಬೆ ಯಿಡಿಗ್ಗರು ಗೆಟ್ಟಿಗೆಯುರೆಮುಡ್ಡಿ ಸೂಸುಗೂಳ್ಗಳೆಂಬಿವಂ ಕೊಂಡು ಪೊಳ್ತಂ ಸಂನೆಯುಂ ಜಾತಿಯುಂ ಜವಂ ಗೆಡದರಿವ ಬಿನ್ನಣಂ ಬಡೆದ ಬೇಡರೊಡವರೆ ನೀಡುಂ ಪರಿವ ಪೆದೊರ್ರೆ ಗೈದಿ ಸಾದ್ದುರ್ ಪೆರ್ದ್ದಪ್ಪ ಮನೇರಿ ನಿಂದು ನಿರೀಕ್ಷಿಸಿ ತಾಣಮರಿದು ಪರೀಕ್ಷಿಸಿ ಸೂಸುಗೂಳಂ ತಳಿದು ತಳ್ವದೆ ಬಪ್ಪರ್ ಬರಮನರಿದು ಮೂಸಿದೊಡೆ ನಾಸಾಗ್ರಮ ನುಚ್ಚುರ್ವ, ನಕ್ಕಿದೊಡೆನಾಲಿಗೆ ಯೊಳ್ನಡುವ, ಪೊಳೆದೊಡೆ ಬೆನ್ನೊಳ್ಮೂಡು ಪೊರಸಿದೊಡೆ ಬರಿಯುಂ ಕೊರೆವುಗುಳ್ದೊಡೆ ಕೀಳ್ದಾಳಿಗೆಯೊ ಳ್ನಾಂಟುವ ಪಲವುಂ ಬಗೆಯ ಗಾಣಂಗಳಂ ಬಿಚ್ಚುರ್ವಲೆ ಬಳ್ಳಿವಲೆ ಗೋರಿವಲೆ ಖಂಡವಲೆಗಳೆಂಬಿವಂ ಬೀಸರಂ ಬೊಗದೆ ಬಿಚ್ಚಿರ್ ಬೀಸಿದಾಗಳ್—

ವೃ|| ಗರಿಮೀ ನ್ನೀಗುಡಿ ಗೆಂಡೆಮೀ ನ್ನವಳವಾಯಂ ಬಾಳೆಮೀ ನ್ನಾವುಮೀ |
ನ್ನಿರುಮೀ ನ್ನಂಗರಿಯಜ್ಜೆ ಕುಜ್ಜಲತಿಗಂ ಕಾಗೆಂಡೆ ಕೆಂಕಲ್ಸರಿ ||
ಲ್ಕೊರವಂಚೇಳ್ಪಸಿಗಂ ಸಸಿಲ್ಗೊದಳೆ ಮೀನ್ಪೊಂಬೊಪ್ಪುಮೀನ್ಪಂದಿ ಮೀ ||
ನ್ನೆರೆಮೀನ್ಸಗ್ಗಡೆ ಬಣ್ಣಮೀನನಿಪಿವೆಲ್ಲಂ ಬಿಳ್ದವಾ ತಾಣದೊಳ್ || ೧೧೫

ವಚನ|| ಅಂತವೆಲ್ಲಮಂ ಗುದಿಗೈದು ಕಾಳಮೇಘಂ ತಡಿಗೈದಿ ನಿಂದಿರ್ಪಿನ ಮಾಗ ಳೊಂದುದ್ದಂಡ ಪ್ರಚಂಡ ಕಂಠೀರವಂ ಗೆಂಟಿನೊಳ್ಪಿಲಯಾಗ್ನಿ ಮೈವೆತ್ತುದೆಂಬಗುರ್ವ್ವನೊಳ ಕೊಂಡು ಗರ್ಜಿಸಿ ನಿಂದು—

ವೃ|| ಘನನಿನದಕ್ಕಿದಗ್ಗಳ ಮೆನಿಪ್ಪ ವೊಲಿಂದ್ರಗಜೇಂದ್ರ ಮಳ್ಕೆ ಗ |
ರ್ಜನೆ ಗುಡುತೆಳ್ದು ಲಂಘಿಸಿ ವಿಜೃಂಭಿಸಿ ಕುಂಭಿಶಿರಃ ಪ್ರದೇಶಮಂ ||
ಕೊನೆಯುಗುರಿಂದೆ ಸೀಳ್ದು ರುಧಿರೋನ್ಮದ ಕೃನ್ಮಧುಮೀಂಟಿ ಗೆಂಟಿನೊ |
ಳ್ಮೊನೆದು ಕುನುಂಗಿ ಕುಪ್ಪಳಿಸಿ ಕಣ್ಗಿಡಿ ಸಾಲಿಡೆ ನೋಡಿ ಬೇಡರಂ ||೧೧೬

ನೆಗೆದುದು ಪಾಯ್ದು ಪೊಯ್ದೊಡಲಿಕ್ಕಡಿಯಾಗಿರೆ ಖಂಡದಿಂಡೆಯಂ |
ತೆಗೆತೆಗೆದಿಟ್ಟು ದೊಟ್ಟಜೆಯಿ ನೊಟ್ಟಿದು ದಟ್ಟಿಯ ನಟ್ಟಿ ಗಂಡು ಗೊಂ ||
ಡುಗಿ ಬಗಿವಾಡಿ ಮಾಮ್ಮಲೆತ ವೀರಕಿರಾತರ ನೊಕ್ಕಲಿಕ್ಕಿ ಧಾ |
ತ್ರಿಗೆ ಪೊಸರಕ್ತ ಪೂರಮೆಸಗಿತ್ತದು ಕೇಸರಿ ಕೇಳ್ಧರಾಧಿಪಾ || ೧೧೭

ವಚನ|| ಆಗಳ್—

ವೃ|| ನಡುಗುವ ಕಾಲ್ಗಳುಬ್ಬರಿಸಿ ಸೂಸುವ ಸುಯ್ಬೆಮರೇರಿ ದಾನಸಂ |
ಪೊಡರ್ವೆದೆ ಪೊಯ್ವಕಿಬ್ಬರಿ ಸಿಡುಂಬಿನ ಮುಳ್ಗಳ ಗಾಯ ಮಂಗದೊಳ್||
ಬಿಡೆ ಬೆದರ್ವಕ್ಷಿ ಜೆಚ್ಚುವ ಮನಸ್ಸ್ಥಿತಿ ತೋರೆ ಪುಳಿಂದ ನೈದುತೆ |
ನ್ನೊಡೆಯನ ಮುಂದೆ ಕೈಮುಗಿದು ನಿಂದವನೆಂದ ನಿದಂಧರಾಧಿಪಾ || ೧೧೮

ಎಲೆಶಬರೇಶ ನೋಡಿದೆ ಯಿದೇಳ್ತರುತಿರ್ದ್ದಪುದಿತ್ತ ನಿನ್ನ ಪೆ |
ರ್ಬ್ಬಲ ಮುಡಿದಸ್ಥಿಯಿಂ ಸುರಿವ ರೋಹಿತದಿಂ ಕಡಿವೋದ ಕಾಲ್ಗಳಿಂ ||
ತೊಲಗಿದ ತೋಳ್ಗಳಿಂ ಪರಿದ ಪೆಗ್ಗರುಳಿಂ ಪೊರಮಟ್ಟ ಖಂಡದಿಂ |
ನಿಲಯದ ಮೃತ್ಯುವಂತೆ ತವೆಕೊಂದುದು ತಿಂದುದದೊಂ ದಿಭಾಂತಕಂ||೧೧೯

ವಚನ|| ಎಂದ ಕಿರಾತ ದೂತೋಕ್ತಿಯಂ ಕೇಳ್ದು—

ವೃ|| ಘನಕೋಪಾಟೋಪಮಂ ತಾಳ್ದರುಣತರ ತರತ್ತಾರನೇತ್ರಂ ತತಸ್ಪಂ |
ದನಯುಕ್ತೋಷ್ಠಂ ಪ್ರಬದ್ಧ ಭ್ರುಕುಟಿನಿಟಿಲ ನುತ್ಕೀರ್ಣಘರ್ಮಾಂಬು ಭೀಮಾ |
ನನ ನುದ್ಯತ್ಖಡ್ಗ ಮೊಂದಂ ಪಿಡಿದು ಜಡಿದದೇಂ ಧೀರನೋ ಧೀವರಂ ಭೋಂ|
ಕನೆ ಬಂದಂ ದೇವ ಕೇಳ್ಭೀಕರ ಕರಿರಿಪು ವಿರ್ಪ್ಪಲ್ಲಿಗಾ ಕಾಳಮೇಘಂ || ೧೨೦

ವಚನ|| ಅಂತು ಪರಿತ್ರಾಸ ನಿರಾಕೃತ ಕಿರಾತ ಸಂಜಾತವೊಡವರೆ ಪಂನತಿಕೆಯಿಂ ಬಪ್ಪಾರ್ಗಳ್ಮುಂದೆ ಮುಂದ್ಮೈಸಿ ಮಡುಗಟ್ಟಿದ ನೆತ್ತರ ಪೆರ್ಬ್ಬೊನಲಿಂ ಕುಪ್ಪಳಿಸಿ ಗುಪ್ಪೆಗೊಂಡ ದೊಂಡೆ ಗರುಳ್ಗಳಿಂ ಪಿಂಡು ಗೊಂಡು ಜೊಂಡೇಳ್ದ ಕಾಳ್ಕಿದುಳ ಕೋಳ್ಗೆಸರಿಂ ದರೆದೆರೆದ ಕಣ್ಗಳಿಂ ಕೆದರ್ದ ತಲೆನವಿರಿಂದೆ ಜಗಿಜಗಿಯಾದ ಪೊಡೆಯಿಂ ದರೆ ಗಚ್ಚಿರ್ದ ನಾಲಗೆಯಿಂ ಕೆಲದೊಳೊಕ್ಕ ಬಿಲ್ಲರಲ್ಗಳಿಂ ಕಡಿವಡೆದ ತೋಳ್ಗಳಿಂದುಡಿದ ನಡುಗಳಿಂ ಜರಿದ ಮುಡುಪಿಂ ಪಾಸಿ ಪರಪಿದಂತೆ ಬಿಳ್ದ ಪೆರ್ವೆಣಂಗಳಿಂ ದತಿಭಯಾವಹಮಾದ ಬಟ್ಟೆಯಂ ನಿಟ್ಟಿಸುತ್ತಿರೆ ತೊಟ್ಟನೆ ಕಟ್ಟಿದಿರೊಳತಿಭೀಕರಾಕೃತಿವೆತ್ತು ಮುರಿದೇಳ್ದುರಿಗೆದರ್ವ ಕಣ್ಗಳಿಂ ನುಂಗುವಂತೆ ನಿರೀಕ್ಷಿಸಿ ಸಂಧ್ಯಾರುಣಿತ ಪಶ್ಚಿಮಾಚಲ ಗುಹಾವಿವರದಂತಿರ್ಪ ಬಾಯಂ ತೆರೆದು ಕಲ್ಪಾಂತಕಠೋರ ಘನಘನಧ್ವನಿಯು ನೇಳಿಪಂತೆ ಗಜರಿ ಗರ್ಜಿಸಿ ನಿಂದವ್ವಳಿಸ ಲುಜ್ಜುಗಿಪಾಗಳ್—

ಕಂ|| ನಡೆನಡೆ ಯಿದಿಚ್ಚರ್ದಿಜೆರ್ |
ಗೊರ್ಡೆಯು ದಿರೊಗೊರ್ಡೆಯು ದಿಕ್ಕರ್ರಂ ಕರವಾಳಿಂ ||
ಪೊಡೆಪೊಡೆ ಯೆನುತ್ತೆ ನಾಲ್ಕುಂ |
ಕಡೆಯೊಳ್ಕವಿದ ಕ್ಕಿರಾತರ ವನೀನಾಥಾ || ೧೨೧

ವಚನ|| ಆಗಳ್ವಿಲಯಾಗ್ನಿ ಮೈವೆತ್ತಂತೆ ಮಾಮುಸಕಂ ಮುಸಗಿ—

ವೃ|| ಜಲಮುಂ ಪೊಕ್ಕ ಲುಲಾಯಮುಂ ಪರಿದು ಪುತ್ತೇರಿರ್ದ್ದ ಭಲ್ಲೂಕಮುಂ|
ಸಲೆಪುಲ್ಗಚ್ಚಿರ್ದ ಪುಲ್ಲೆಯುಂ ಕುಜದ ಕೊಂಬಂ ಸಾರ್ದ್ದಸತ್ಪಕ್ಷಿಸಂ ||
ಕುಲಮುಂ ಕುಂದದೆ ಕೊಂದಘುಕ್ಕಿದೆ ಘಲಂ ನೋಡೆಂಬವೋಲ್ಬೇಡರಂ |
ಬಲಿಗೊಂಡತ್ತು ಬಲಾಹಕಧ್ವನಿಮಿಳತ್ಕಂಠೋಗ್ರ ಕಂಠೀರವಂ || ೧೨೨

ವಚನ|| ಅಂತದಂ ಕಂಡು ಕಾಲಮೇಘಂ ಪ್ರಳಯಕಾಲ ಮೇಘದಂತೆ ಗಜರಿ ಗರ್ಜಿಸಿ ಕೆರಳ್ದು ಕಿಡಿಕಿಡಿವೋಗಿ ನೋಡಿ—

ವೃ|| ಜಡಿದಸಿಯಂ ಝುಳುಂಪಿಸಿ ಕರಾಗ್ರದೊಳೆತ್ತಿ ಕಡಂಗಿ ಸಾರ್ದ್ದು ಬೊ |
ಬ್ಬಿಡುತೆ ಪಳಂಚಿ ದಂಡೆಗುಡುತಾರೆಪುಳಿಂದರ ಮಂದಸತ್ವದಿಂ ||
ಕೆಡೆಕೆಡೆಯೆಂದು ಪೊಯ್ದನದ ನಿಕ್ಕಡಿಯಾಗಿರೆ ನಿನ್ನಭೃತ್ಯನಾ |
ಕಡುಗಲಿ ಕಾಳಮೇಘ ನವನೀಶ್ವರಶೇಖರ ರಾಜಶೇಖರಾ || ೧೨೩

ವಚನ || ಅಂತು ಪೊಯ್ದನಂತರಂ—

ವೃ|| ಸೀಳ್ದು ತದೀಯಮಸ್ತಕದ ಮಾಣಿಕಮುಂ ನಡೆ ನೋಡಿ ಕೌತುಕಂ |
ದಾಳ್ದಿದನರ್ಘ್ಯಮೆಂದು ಬಗೆಯುತ್ತಿರೆ ಬಂದುದಿದೆಮ್ಮ ದೇಶದಿಂ ||
ಕೇಳ್ದಿಟ ಮೆಮ್ಮದೀಮಣಿಯೆನುತ್ತಿರದೈದಿ ತೊಡಂಕಿ ಸಿಂಹಳ |
ಕ್ಕಾಳ್ದನ ಭಂಟರುರ್ವ್ವಿ ಮಿಗೆ ಕಾಳೆಗಮಂ ತೆಗೆದರ್ದರಾಧಿಪಾ || ೧೨೪

ವಚನ|| ಆಗಳ್—

ವೃ|| ಕರೆದೆನ್ನಂ ಕಲಿಕಾಲಮೇಘನೆಲೆ ನೀಂ ಪೋಗಲ್ಲಿಗಾ ರಾಜಶೇ |
ಖರನೆಮ್ಮಾಳ್ದನವಂಗೆ ಕಾಣ್ಕೆಗುಡು ಕೊಳ್ಳೆಂದಿತ್ತು ತದ್ರತ್ನವುಂ ||
ಭರದಿಂದಂ ಕಳಿಪುತ್ತೆ ಮತ್ತವರೊಳಿನ್ನುಂ ಕಾದುತಿರ್ದರ್ಪ್ಪ ನೀ |
ಪರಿಯಂ ನಿಮ್ಮಡಿಗಿಂದು ಬಿನ್ನವಿಸಲಾಂ ಬಂದೆಂ ನೃಪಾಲೋತ್ತಮಾ|| ೧೨೫

ವಚನ|| ಮತ್ತಮಾ ಸಿಂಹಳಂ—

ಕಂ|| ಈಮಣಿಗೋರಗೆ ಯೆನಿಪಮ |
ಹಾಮಣಿಯೊಳವೆಂಬ ಬಿಂಕದಿಂ ದಂಬುಧಿಯೊಳ್ ||
ಶ್ರೀಮಹಿಮೆಯಾಂತೆ ನಾನೆಂ |
ಬೀಮದದಿಂ ದೆನಗೆ ದೊರೆಯದಾ ದ್ರೊರ್ರೆಯೆಂಬಂ ||೧೨೬

ವಚನ|| ಎಂದು ಸಿದ್ದರ್ ಮತ್ತಮಿರದೆ—

ಕಂ|| ದೇವರಡಿಗಂಡು ಕಪ್ಪಮ |
ನೀವರ್ಚರ್ಪ್ಪನ್ನ ದೇಶದರಸ ವ್ವರ್ಸುರ ||
ತ್ನಾವಳಿಯ ನತುಳಸಿಂಹಳ |
ನೇವೇಳ್ವೆಂ ಗಣಿಸದಾಗಳುಂ ಬೆರೆತಿಪ್ಪರ್ಂ || ೧೨೭

ವಚನ|| ಎನೆ ನಿರೀಕ್ಷಿಪರಸಂಗೆ ದೇವಾ ಸಿಂಹಳೇಂದ್ರನೆಂದುಂ ಕಪ್ಪಮಿತ್ತನಲ್ತೆಂದು ಗಣಕಗಣ ಮಣಿಯರಂ ನಿಂದು ಕೈಮುಗಿದು ಪೇಳೆ ಕೇಳ್ದು ಕೆರಳ್ದು—

ಕಂ|| ಸೊಕ್ಕೊರ್ಗೆದಬ್ಧಿಯಮಧ್ಯದೊ |
ಳುಕ್ಕಿರ್ದ ಸಿಂಹಳನ ಮದಕಿದೌಷಧ ಮೆನಿಕ್ಕುಂ ||
ತೋಕ್ಕರ್ವಡೆದೆಸೆವ ಬಾಳುವೊ |
ಣಕ್ಕರ್ಗೆ ಪೊಡಯಿವುದು ಭೇರಿಯಂ ಭರದಿಂದಂ || ೧೨೮

ವಚನ|| ಎಂದು ನಿಜಮಂತ್ರಿವದನಮಂ ನೋಡಿ ಮತ್ತಮಿಂತೆಂದಂ—

ಕಂ|| ಜಳನಿಧಿಯೊಳಿಪ್ಪರ್ನೆಂಬ |
ಗ್ಗಳಿಕೆಯ ದಂತಿಕ್ಕರ್ ಮಿಕ್ಕಲೋಕಾಂತರದೊಳ್ ||
ಬಳವೆರಸಿ ನಿಂದೊಡಂ ಕ |
ಸ್ನಳವಂ ಬರಿಕೈದು ತೋಪ್ಪರ್ ನೆನ್ನಯ ಬಲವಂ || ೧೨೯

ವೃ|| ಇಂತೆನೆ ದೇವ ದೇವಪತಿ ಮುಖ್ಯದಿಶಾಧಿಪ ರಳ್ಕುತಿಪ್ಪರೋ |
ರಂತೆ ಭವತ್ಪ್ರತಾಪ ವಿಭವಕ್ಕೆನೆ ಗಣ್ಯನೆ ಸಿಂಹಳಂ ಮಹಾ ||
ದಂತಿಗಳಂ ಬೆಗಳ್ಗೊಳಿಪ ಸಿಂಹಕೆ ಲಕ್ಷ್ಯಮೆ ಪುಲ್ಮಿಗಂ ಮಹೀ |
ಕಾಂತವರೇಣ್ಯ ಮಾಳ್ಪುದೆನ ಗೀಬೆಸನಂ ಸೆರೆಗಟ್ಟಿ ತಂದಪೆಂ || ೧೩೦

ವಚನ|| ಎಂದು ನುಡಿದ ಮಿತವಚನ ಕುಮಾರನ ವದನಾರವಿಂದಮಂ ನೋಡಿ—

ಕಂ|| ವಿತತ ಚತುರಂಗಬಳ ಸಂ |
ಯುತ ನತಿಸಾಹಸಿ ಸರೋಧಿ ಮಧ್ಯಸ್ಥಿತನು ||
ದ್ಧತ ನಾ ಸಿಂಹಳನಲ್ಲದೊ |
ಡಿತರರವೊಲ್ಕಪ್ಪ ಮಿತ್ತದೇಂ ಸೇವಿಸನೇ || ೧೩೧

ವಚನ|| ಇಂತೌದ್ಧತ್ಯ ಸಾಹಸ ಸಮಗ್ರನಾಗಿರ್ಪ್ಪ ನಾದೊಡಂ—

ಕಂ|| ನಿನ್ನಿಂತೀರದ ಕಜ್ಜಮ |
ದಿನ್ನೆನಗೊಂದುಂಟೆ ನಿಜದಿ ನಂತಾದೊಡಮೇ ||
ನೆನ್ನಯ ಭುಜಕಂಡೂಹೃತಿ |
ಯಂ ನೆಗಳ್ವೆಂ ತೋರ್ಪ್ಪೆ ನೆನ್ನ ಸಾಹಸ ದಿರವಂ || ೧೩೨

ವೃ|| ಎಂದಲ್ಲಿಂದೇಳ್ದ ಮಾತ್ಯಂಬೆರಸು, ಭರದಿನೈತಂದು ತದ್ರತ್ನಮಂ ತಾಂ |
ಮುಂದಿಟ್ಟಾದ್ಯಂತ ಕಾರ್ಯಸ್ಥಿತಿಯ ನೊಸೆದು ವಿಜ್ಞಾಪನಂ ಗೈದಮಂದಾ|
ನಂದಂ ಚಿತ್ತಂಘ್ರಿಕಂಜಕ್ಕೆರಗಿ ಪರಕೆಯುಂ ಕೊಂಡು ಚೋಳೇಂದ್ರನಿಂ ತಾ |
ಳ್ದಂ ದೊಲ್ಲಾದೇಶಮುಂ ತದ್ರಣಕೆ ತೆರಳಲುದ್ಯುಕ್ತನಾದಂ ಕುಮಾರಂ|| ೧೩೩

ಮಾತೆ ಮಹೀಧ್ರಜಾತೆ ಮಹನೀಯ ಸುರಾಸುರಸೇವ್ಯಪಾದಕಂ |
ಜಾತೆ ಕಳಾಪ್ರಣೀತೆ ಕಮನೀಯಕಟಾಕ್ಷ ಸುರಕ್ಷಿತಾಮರ ||
ವ್ರಾತೆ ರಸಾಧಿಭೂತೆ ರಮಣೀಯ ರಮಾರತಿ ಮುಖ್ಯಶಕ್ತಿವಿ |
ಖ್ಯಾತೆ ವಿನೀತೆ ಭೂತಪತಿವಲ್ಲಭೆ ಪಾಲಿಪುದೆನ್ನ ನಂಬಿಕೇ || ೧೩೪

ಗದ್ಯ|| ಇದು ವಿನಮದ ಮರವರ ಮಕುಟ ತಟ ಘಟಿತ ಮಣಿಗಣ ಮಹಾಪ್ರಭಾ ಪಟಲಪಂ
ವೃತ ಪರಶಿವ ಶ್ರೀಪಾದ ನಖ ಚಂದ್ರ ಸಾಂದ್ರ ರುಚಿರುಂದ್ರ ಚಂದ್ರಿಕಾ ಚಂಚಚ್ಚ
ಕೋರಾಯಮಾನ ಸರಸಜನ ಮಾನಿತೋಭಯ ಕವಿತಾ ವಿಶಾರದ ಶ್ರೀಷಡ
ಕ್ಷರದೇವ ವಿರಚಿತ ಮಪ್ಪ ರಾಜಶೇಖರವಿಳಾಸ ವಿಪುಳ ಪ್ರಬಂಧದೊಳ್
ಕಿರಾತದೂತಾಗಮನ ಮೃಗಯಾ ವರ್ಣನಂ
ಪಂಚಮಾಶ್ವಾಸಂ
ಸಂಪೂರ್ಣಂ



# ಷಷ್ಠಾಶ್ವಾಸಂ

(ರಾಜಶೇಖರವಿಜಯ ವರ್ಣನಂ)

---

ಕಂ || ಶ್ರೀನಗರಾಜಸುತಾಮಧು |
ರಾನನ ವಿಧುಬಿಂಬ ಚುಂಬನಸ್ವೀಕೃತಪಂ ||
ಚಾನನ ನಘಮದಗಜ ಪಂ |
ಚಾನನ ನೆಮಗೀಗೆ ಸೌಖ್ಯಮಂ ಶಿವಲಿಂಗಂ || ೧

ವ|| ಆಗಳಾರಾಜಶೇಖರ ನರೇಂದ್ರನ ವಿಜಯಯಾತ್ರೆಗೆ ಸಹಾಯಂ ಬಪ್ಪಂತೆ ಶರದಂ ಬರಲೊಡನೆ—

ವೃ|| ಮೊಳೆ ಮೋದತ್ತಬ್ಜಕಂದಂ ಕೊಳದೊಳೆ ಬೆಳೆದಾಳ್ದತ್ತಿಳಾಮಂಡಳಮಂ
ಡಳಿಗೊಂಡಾಗಳ್ಮರಾಳಾವಳಿ ನಗದಬಿಲದ್ವಾರದಿಂದೆಳ್ದುದಾಶಾ ||
ವಳಯಂ ತೋರ್ಪಟ್ಟುದಬ್ಜಂ ಪಳಚನಲರ್ದುದಬ್ಜಾರಿಬಿಂಬಂ ಕಳಂಕಂ |
ಕಳಿದತ್ತೆಂಬಂತೆ ನೀಡುಂ ತೊಳಗಿತು ತಿಳಿದತ್ತಾಪಗಾ ವಾರಿಪೂರಂ || ೨

ವಚನ|| ಅಂತುಮಲ್ಲದೆಯುಂ—

ಕಂ|| ಅತಿನಿರ್ಮಲತೆಯನೀಮಲಿ |
ನತೆಯಾಂತ ಪಯೋದಮಾಲೆಗಾಗಿಪ ಶರದಂ ||
ವಿಶತಸಿತದ್ಯುತಿತತಿರಂ |
ಜಿತ ಚಂದ್ರಂಗೀವನೆಂಬುದೊಂದಚ್ಚರಿಯೇ || ೩

ವೃ|| ಘನನಾಮಂ ಲೋಕದೊಳ್ಪೆರ್ಗೆಗೆಡಿಯೆನಿಸಿತ್ತಕ್ಕಟಾಕೆಮ್ಮನೀಮಿ|
ತ್ರನ ತೇಜಕ್ಕಡ್ಡಲಾದೆಂ ದ್ವಿಜಗತಿ ಗೆಡಿಸಿರ್ದೆಂ ಜಗತ್ಪಂಕಮೆನ್ನಿಂ ||
ಜನಿಸಿತ್ತಾ ರಾಜಹಂಸಾಹಿತ ನೆನಿಸಿದೆ ನೆಂದುಂ ಜಡಗ್ರಾಹಿಯಾನಾ |
ದೆನೆನುತ್ತುಂ ಚಿಂತೆಯಿಂ ಬೆಳ್ಪಡರ್ದೆನೆ ತದಬ್ದಂ ಶರನ್ಮೇಘ ಮಿಕ್ಕಿರ್ಗಂ || ೪

ವಚನ|| ಮತ್ತಂ—

ಕಂ|| ಅಡ್ಡಮಿರೆ ಕಾರಕಾಮುರ್ಗಿ |
ಲೊಡ್ಡಣಮಿಳಿಗಿಳಿಯದೊತ್ತರಿಸಿ ಮುಂದೈಸು ||
ತ್ತೆಡ್ಡಮೆನೆ ಸಿಂದಚಂದ್ರಿಕೆ |
ಯೊಡ್ಡೆನೆ ಬೆಳ್ಮುಗಿಲದೇಂ ಮನಂಗೊಳಿಸಿದುದೋ || ೫

ಕಂ|| ಬಾಂಬೊಳೆ ಯೊಳಗಿದು ಮುಳಿಗಿ |
ದ್ದರ್ಂಬುದ ಮುದು ತೊಲಗೆ ನೆಗೆದು ನಿಂದಂಚೆಯ ಪಿಂ ||
ಡೆಂಬಂತಿರೆ ಬೆಳ್ಮುಗಿಲದ |
ರಿಂ ಬೀಳ್ವತುಷಾರಮುದರ ಗರಿವನಿಯೆನಿಕುಂ || ೬

ವೃ|| ನಾಕಪುಂಡರೀಕ ಮಂಬರಾಪಗಾ ಪಯಸ್ಸ್ಥಿತಾ |
ಸ್ತೋಕಪುಂಡರೀಕ ರಾಜಿಯಂ ಕರಾಗ್ರದಿಂದೆ ಕೀ |
ಳ್ತೆಕಕಾಲದಲ್ಲಿ ಚೆಲ್ಲಿದಂತೆವೋಲ್ಮೃಣಾಳನಾ |
ಳೀಕದಂಬ ಶುಭ್ರಮಭ್ರ ಮಧ್ಯದೊಳ್ವಿರಾಜಿಕುಂ || ೭

ಹರಿದಶ್ವಶ್ವಾಸ್ಯದಿಂದಂ ಸುರಿದು ಪರೆದು ಪೆಂಪಾಳ್ದಫೇನೌಘಮೋನಿ |
ರ್ಜರ ಗಂಗಾತೀರ ರಾಜದ್ಧವಳ ವಿಪುಳ ಕಂಜಾತ ಸಂಜಾತವೋ ವಿ ||
ಸ್ಫುರಿತಾಸಂತ ಪ್ರಮುಕ್ತ ಪ್ರವಿತತ ಸಿತನಿರ್ಮೋಕವೋ ವ್ಯೋಮಲಕ್ಷ್ಮೀ |
ಪರಿವೀತಶ್ವೇತಚೇಲಾಂಚಲವೊ ಎನೆ ದಲಿಂಬಾಯ್ತು ಶುಭ್ರಾಭ್ರಜಾಲಂ|| ೮

ತಡಿವಿಡಿದೇಕ ಪಾದದೊಳೆ ನಿಂದರೆಗಣ್ಣುಗಿದಾತ್ಮಚಂಚುವಂ |
ನಿಡುಗೊರಲಿಂ ಮರಲ್ಚಿ ನಿಜಪಕ್ಷದೊಳೊಯ್ಯನೆ ಸಾರ್ಚಿ ಮೌನಮಂ ||
ಪಿಡಿದೆಡೆಗೈದಿ ದಂಬುಚರಮಂ ಜವದಿಂ ತವೆ ನುಂಗಿ ಸಾರ್ದು ಸಾ |
ಲ್ವಿಡಿ ದೆಡೆಗೊಂಡನೇಕ ಬಕಪಙ್ಕ್ತಿಗಳಿಂ ಕೆರೆ ತಳ್ತು ರಂಜಿಕುಂ || ೯

ಪರಿದೈತಂದರಸಂಚೆಯಂ ಕರೆದು ಭೃಂಗೀನಾದದಿಂದಿತ್ತು ಗಂ |
ಧರಜಃಪೂರ್ಣ ಮರಂದ ದರ್ಘ್ಯಮನ ಮುಚ್ಚೃತ್ತಾಂಬುರುಟ್ಪೀಠಮಂ ||
ಮರುದಾನೀತ ದಳಾಂಬರಂ ಬೊದಿಸುಣಲ್ಕಿತ್ತಬ್ಜ ಬೀಜಂಗಳಂ |
ಶರದಂಭೋಜಿನಿ ಮಾಡಿದಳ್ದ್ವಿಜವರಂಗಾತಿಥ್ಯಸತ್ಕಾರಮಂ || ೧೦

ವಚನ|| ಇಂತೊಗೆತಂದ ಶರದೃತುವಿನೊಳಾ ಕುಮಾರಂ ವಿಜಯಯಾತ್ರಗೆ ಪೋಗಲು ಜ್ಜುಗಿಸಿ ಪೊರಮಟ್ಟು ಪೊರಗಿಕ್ಕಿದ ಪಟ್ಟವಣೆಯ ನಳಂಕರಿಸಿ ಕುಳ್ಳಿರ್ದ್ದ ಮಾತ್ಯವದನಾರವಿಂದ ಮಂ ನಡೆನೋಡಿ ಸಮರ ಪ್ರಸ್ಥಾನಭೇರಿಯಂ ಪೊಡೆಯಿಸೆಂಬುದು ಮವಂ ತಂತ್ರಾಧ್ಯಕ್ಷನಪ್ಪ ಮೇಘನಾದನಂ ಬರಿಸಿ ಬೆಸೆಸುವುದು ಮವಂ ಬಂದು ಕನತ್ಕನಕ ಕೋಣಮಂ ಪಿಡಿದಡಸಿ ಪೊಡೆದಾಗಳ್—

ವೃ|| ಕಡೆಲೇಳುಂ ಕದಡೇಳ್ದು ತುಳ್ಕೆ ಫಣಿರಾಜಂ ಬಳ್ಕೆ ದಿಕ್ಪಾಲಕ |
ರ್ಸ್ನಡೆಯಲ್ದಿಕ್ಕರಿ ವೃಂದಮುಳ್ಕೆ ಭಗಣಂ ಪಾಯ್ದುಳ್ಕೆ ಭೂಭೃತ್ಕುಳಂ ||
ಶುಪಿಂ ಕಂಪಿಸೆ ಪದ್ಮಜಾಂಡ ಘಟಮುಂ ತುಂಬಿತ್ತು ಕಲ್ಪಾಂತ ದು |
ಗ್ಧೋದರವಂ ಬೊಲಿಂಬುವಡೆದಾ ಗಂಭೀರಭೇರೀರವಂ || ೧೧

ವಚನ ॥ ಅದಂ ಕೇಳ್ದು ಕಡುಸಡಗರಂ ಮಿಕ್ಕು ಮಾರಂಕಮಾವುತಂಗಿಕ್ಕಿದ ಬಿರುದಿನ ತೊಡರ್ಝುಣರ್ಝುಣಿಸಲೇಳ್ದು ಸಪ್ತಮದಾವಸ್ಥೆಯಿಂ ಮುಂದುಗಾಣದೆ ಬಲ್ಗಂಬಮಂ ಮುಱಿದು ನಿಗಳಮಂ ಪಱಿದು ನಿಟ್ಟೋಟದಿಂ ಬೀದಿವಱಿದಾರೆಕಾರರ ನರೆಯಟ್ಟಿ ಕೆಂಗಣ್ಮಸಗಿ ಕೇಗ್ಗರ್ಗಳಂ ನುಗ್ಗಿರ್ ಸಿಲ್ಕಿದರಂ ಸೀಳ್ದು ಕಂಡರಂ ಕಾಲ್ಗೆಡಿಸಿ ಪೊಡೆದು ಕಡಂಗಿ ಕಾಯ್ಪೇರಿ ದಿಕ್ಕುಂಭಿಗಳಳ್ಕೆ ಬೃಂಹಿತಂಗೈದಂಗಡಿಗಳನಣೆದು ಪೊಯ್ದು ಮಾಮಸಕಂ ಮಸಗಿ ಕೋಲಾಹಲಮು ನೆಸಗಿ ಬಾಳಿಮೀನಂತೆ ಭಱಿಕಯ್ಯ ನೆಳಲೊಳ್ಪಱಿವ ಕುಸಿದಿಟ್ಟ ಚಕ್ರದಂತೆ ಕುನುಂಗಿ ಪಱಿವ ಸುಟ್ಟುರೆಗಾಳಿಯಂತೆ ಸುಳಿಸುಳಿದು ಪಱಿವ ತೋರಣದೊಳ್ನುಸುಳ್ವಂತೆ ತಲೆದಗ್ಗಿರ್ ಪಱಿವ ಕಳಕಳಮು ನಾಲಿಸುತಡ್ಡವರಿಯೊಳಾಂತು ನಿಂದಿದಿರ್ಚ್ಚಿರ್ ಪರಿವೊಟ್ಟಜೆಯಿಂ ಸಿಲ್ಕಿದರಂ ಪಿಡಿವ ಜಡಿವ ಜಾಡಿಸುವ ತುಡುಂಕಿ ತೆಗೆವ ತೊಡಂಕಿಪಾಯ್ವು ಕಡಂಗಿ ಪೊಯ್ದೊತ್ತಿಯಿಳಿವುವ ಪೊತ್ತುಪಱಿವ ಸುತ್ತಿ ತೆಗೆವ ಮೆಟ್ಟಿ ಸೀಳ್ವ ಕಟ್ಟುಬ್ಬಟೆಯು ದುಷ್ಟಗಜಂಗಳಂ ಸಱಿಸದೊಳ್ನಿಂದು ಸರಂದೋಱಿ ಸಂಮುಖಂಗೈದು ಗಜಾರಿ ಗರ್ಜನೆಯಿಂ ಗಜಱಿ ಗರ್ಜಿಸಿ ನೆರೆದುನೋಳ್ಪ ಪುರಜನಮಱಿದಱಿದೆನೆ ಸರಸರನೆ ಪಱಿದು ಬಱಿಕಯ್ಯಂ ಪಿಡಿದಡದ್ದುರ್ ಬಿದುವ ನಪ್ಪಳಿಸಿ ಚಪ್ಪರಿಸಿ ಕೂರಂಕುಶಮನಿಕ್ಕಿ ಸೆಳೆದೆಳೆ ದಂಗುಟದ ತುದಿಯಿಂ ಕರ್ಣಮೂಲಮನಣೆ ದಲೆದು ನೂಂಕಿ ಶಂಕೆಯಿಲ್ಲದೆ ಪಿಂಡಾನೆಗಳೊಂದುಗೂಡಿ ಶಿಕ್ಷೋಪಕರಣಂಬೆರಸು ಸುಳಿದೇರುವ ಸುತ್ತಂ ಮೆಟ್ಟಿಸುವ ವಿಸಟಂ ಬಱಿಯಿಪ ಡ್ಡತರದೊಳಿಕ್ಕುವ ಥಟ್ಟುವರಿಯಿಪ ತೇರೈಪ ಬೋಳೈಪ ಜೋಹರದೊಳ್ಸರೆಗೈವ ಚೌಪಟದೇರಾಟ ದೊಳ್ಚಧುರಂ ತೋರ್ಪ್ಪರ್ಕೈಗೊಲೆ ಬಾಯ್ಗೊಲೆ ಮೈಗೊಲೆ ಕಾಲ್ಗೊಲೆ ಕೋಳ್ಗೊಲೆಯುಂ ಕಲಿಪ ಕಡುಬಿನ್ನಣಂ ಬಡೆದು ಕಟ್ಟಾಳ್ತನಂ ಬೆತ್ತಿಂತು ಗಜಾರೋಹಣ ಧುರೀಣ ರಾದಾಧೋರಣರ್ನೆರೆನೆರೆದು ಪಱಿಪಱಿದು ಬೇರೆಬೇರೆ ನಿಜಗಜಂಗಳಂ ಪಣ್ಣಿ ಕೈಗೈದು ಪೂರ್ವಾಸನಮನವಷ್ಟಂಭಿಸಿ ಸಂಭ್ರಮಂಮಿಗೆ ನೆರಪಿದಾಗಳ್ಕೋಡ ಮೊನೆಯೊಳ್ತಗುಳ್ಚಿದ ಸೂನಗಿಗತ್ತಿಯ ಕೊನೆಗೊಡಂಕೆಯೊಳ್ತೊನೆವ ಬಿಳಿಯ ಚಾಮರದ ಬಿದುವೋಳ್ಪರೆದು ಬಚ್ಚಿರ್ಸಿದ ಸಿಂದೂರದ ಬಚ್ಚರ್ಣೆಯ ಪಣೆವಾಸೆರೆ ನೆಲೆಯೊಳಮಚ್ಚಿರ್ ರಚಿಸಿದ ತಮಾಲರೇಖೆಯ ತಲೆವಳಸಿ ನೆಲೆಗೊಳಿಸಿದ ಮಾಣಿಕ್ಯದ ತಲೆಮಾಲೆಯ ಪರಿಸರದೊಳೆಳಲೆ ವಿಟ್ಟಕನಕದರಳೆಲೆ ಮಾಲೆಯ ಕಟತಟದೊಳಿಳಿಪಿದಾಣಿ ಮುತ್ತಿನಚ್ಚ ಕುಚ್ಚುಗಳ ಕನಕಘಂಟೆಗಳ್ಮೊಳರ್ವ್ವ ಕೊರಲ ಮಿಸಿನಿಯ ತೊಂಗಲ್ವರಜಿಯ ಚಿನ್ನಮಣಿ ಪುದಿದ ಪಕ್ಕಘಂಟೆಯ ಬೆನ್ನೊಳೆತ್ತಿದ ಕದಳೀಸ್ತಂಭದ ಋಕ್ಷಚರ್ಮದ ಪಕ್ಷರಕ್ಷೆಯ ಮೇಲೆ ಪೊಡೆವ ಬೀರಡಾವಡೆಯ ಪಿಂಗಾಲೊಳೆಳಲ್ವ ಭಾರಿಸಂಕಲೆಯರ್ಝುಣರ್ಝುಣಿಪಪೊನ್ನಂದುಗೆಯವಿಳಾಸಮುಳವಡೆ ಬಳವೈರಿ ಯೊಳ್ಪಳಂಚಲೆಂದು ನೀಲಾಚಲಂಗಳ್ಸಾಲಿಟ್ಟುವೆಂಬ ಬಿಂಬಕಮನಂಕಿಸಿ ಕಣ್ಗೆವಂದ ಗಂಧಸಿಂಧುರ ಸಂಮೂಹದಿಂ ಮತ್ತಂ ಕಿಳಿರ್ವ್ವಗೋಳಿಗೆಯ ದನಿ ಕಿವಿವುಗದಮುನ್ನಂ ಮಂದುರದೊಳಂದಂ ಬಡೆದು ನಿಂದಬಲ್ಗಚ್ಚಿನ ಮುಂಡಿಗೆಯಂಮುಱಿದು ಪಿಂಗಾಲ್ಗೆತೊಡಚ್ಚಿರ್ದಗ್ಗದಗ್ಗರಣೆಯಂ ಛಟಛಟನೆ ಕೀಳ್ತು, ಕಿಳಿದ್ದುರ್ ಪಿಡಿಯುಲೊಡಚ್ಚಿರ್ ತಡೆದು ತೊಡಂಕಿ ತುಡುಂಕಿದ ಗೋವಳನಂ ಕೊಡಪಿ ಕೆಡಪಿ

ಕಡೆವಾಯ್ದು ನಡುವೀದಿಗೆ ಕಡುವೇಗದಿಂ ಪರಿತಂದು ನಿಂದು ನೆರೆದ ಜನಂ ಕಲ್ಲೊಳಿಟ್ಟ ಕವಡಿಕೆಯ ರಾಶಿಯಂತೆ ಝಲ್ಲನೆ ಕೆದರೆ ಖರಖುರಾಗ್ರಘಾತಜಾತ ವಿತತಧರಾತಳ ರಜಃಪಟಲಂರವಿಮಂಡಳಮನಂಡಲೆಯಲೆಂದು ಮುಸುಂಕೆವಿಸಟಂಬರಿವ ಸೂಕಳಾಶ್ವಂಗಳ ನಂಕಣಿಯಂಬಗೆಯದೆ ಮುಂಕೊಂಡು ಶಂಕಿಸದೇಱಿವೀಱಿ ಬೀದಿಗೊಂಡು ಪರಿಯಿಪಾಗಳ್ಮುಂಗಾಲ್ಗಳಂ ನೆಗಪಿ ನಿಲ್ವಪಿಂಗಾಲ್ಗಳಂ ಕೀಳ್ತು ದಾಂಟುವ ಪೊರಕಾಲ್ಗಳ್ವ ಮರಳಿ ಮೆಟ್ಟುವ ಬಱವಱಿವ ಸರಳಿಸಿಪಾಯ್ವ ಚಪ್ಪರಿಸುತುಪ್ಪರಿಪ ವಿಡಿವ ಕಡೆಗಣಿಸಿ ಪಾರ್ವ ದುಂಡಿಪ ದಿಂಡುವಾಯ್ವ ಬವಱಿವಱಿವ ಚಮ್ಮಟಿಗೆಗೆ ಚಳಿಯದ ಕಡಿಯಾಣಮಂ ಲೈಕೊಳದಬಗೆಯಂ ಬಗೆದಂತೆ ಕಂಡು ಮನಮಱಿದು ಮೆಯ್ಯಱಿದು ಪೊಲಂಬಱಿದು ಪೊಳ್ತಱಿದು ದನಿಯಱಿದು ದಶೆಯಱಿದು ಬೋಳೈಸಿ ಹಜ್ಜಗೊಳಿಸಿ ತೊಡೆಮಡದನಿಚಂಮುಟಿಗ ಗಳಿನೊಯ್ಯನೊಯ್ಯನೆ ಮೈವಳಿಗೆ ತಂದೊಡಂಬಡಿಸಿ ಕಡಂಗಿ ನಡೆಯಿಪ ಪೊಳಯಿಪ ದುವ್ವಾಳಿಪ ಪೊಱಮಡಿ ಪಿದಿರೇಱಿವ ಪಡ್ಡಂಬಱಿಯಿಪ ರಾಘವಾಘೆಯೊಳ್ಸರಿಸಂ ಗೊಂಡೊಂದೆ ಮೆಯ್ಯೊಳ್ಸೊಳಱಿದೇರುವ ಸುತ್ತೇರುವ ಬಿತ್ತರಂ ಬಡೆದ ವಾಹಳಿತನದೊಳ್ಕನ್ನೆನಿಳಿಕ್ಕೈವ ಶಾಲಿಹೋತ್ರನ ನಾಳಿಗೊಳ್ವ ಗೋಳಾಯ್ಲನೆಱೆದು ಕನಕ್ಕನಕ ಕವಚಮಂ ತೊಟ್ಟು ಕಾಲ್ಗುಪ್ಪಸಮ ನಿಟ್ಟು ಸೀಸಕಮಂ ಸಿಂಗರಿಸಿ ಬಾಹುರಕ್ಕೆಯ ನಾಂತು ಸಾಂಬ್ರಾಣಿಯಂ ಬಿಗಿದುಡಿಯೊಳೊಪ್ಪಂಜುಱಿಗೆಯಂ ಕಟ್ಟಿ ಗಱಿಗಣೆಗಳ್ತುಱುಗಿದ ಪೊನ್ನಬತ್ತಳಿಕೆಯಂ ಬೆನ್ನೊಳ್ತಳೆದು ತರಕಸಮಂ ನಡುವೆಗಲೊಳೊತ್ತಡರ್ಚಿ ಪಂಚವಣ್ಣದ ಬಟ್ಟೆಯ ಬಿರುದಿನ ಬೀರಗಚ್ಚೆಗಟ್ಟಿರ್ದ ಪಿರಿಯ ನೇಜೆಯ ಮನೋಜೆಯಿಂದೆತ್ತಿ ಪಿಡಿದು ಸಮರ ಸಮಯ ಸಮುಚಿತನ್ನಪಥ್ಯಂಬಡೆದಬ್ಬರಿಸಿ ಬೊಬ್ಬೆಗೊಟ್ಟೇಱಿ ಸರಭಸಂ ಪರಿಯಿಪಾಗಳ್ಪೊನ್ನ ಕಡಿವಾಣದ ರನ್ನದ ಮೊಗರಂಬದ ಕಿವಿಯ ಚಾಮರದ ಸುತ್ತುಜಲ್ಲಿಯ ನೆತ್ತಿಯ ಬೆಳ್ಗಱಿಯ ನೊಸಲಕನ್ನಡಿಯ ರೇವಂತಮಾಲೆಯ ಗರ್ಗರದ ತರಜಿಗತ್ತಱಿಯ ಪೊರ್ಕುಳಘಂಟೆಯ ಪೊಂಬೆಸದ ಗುಬ್ಬಿಯ ಪಾಱಿವದ ಸಂಧ್ಯಾರಾಗದ ದೇವಾಂಗದ ನವರಂಗದ ಸುವರ್ಣಪಳಿಯ ಪಳದಿಯ ಜೋನೆಳಿಯ ಪಲಬಗೆಯ ಪಲ್ಲಣದ ಪಕ್ಕಜಲ್ಲಿಯ ಪದ್ಮರಾಗದ ಪಾವುಡದ ಪರುಠವಣೆ ಪಸರಿಸೆ ಶರಧಿಮಥನ ಸಮಯದೊಳ್ಘುಳುಘುಳಿಸಿ ಘಳಿಲನೆ ಪರಿವ ಪೆರ್ದೆರೆಯ ದೊರೆಗೆ ವಂದುರಯದಿಂ ಪರಿದು ನೆರೆದು ತರಂಗೊಂಡ ತುರಂಗ ಸಂಘಾತದಿಂ, ಮತ್ತಂ ಹೂಡಿದ ಹಯಂಗಳ ಜೋಡಿಸಿದಚಕ್ರಂಗಳ ಮುಗಿಲೊಳ್ಪಳಂಚುವ ಪಳವಿಗೆಯ ಸುವರ್ಣದೊಡ್ಡವಲಗೆಯ ನೆಗಪಿ ನೆಟ್ಟ ಘನತ್ರಿಶೂಲದ ಕೆಲದೊಳಿಳಿಪಿದಂಬಿನ ಪೊದೆಯ ಸಾರ್ಚಿ ನಿಲಿಸಿದ ಶರಾಸನದ ಕೀಲ್ಮೊಲಿಯೊಳಿಪಿದ ಪಾರುಂಬಳೆಯ ಸಂಗಳಿಸಿದ ಮುಕುರತೋರಣದ ಮುಂಗಡೆಯೊಳಿಕ್ಕುವ ಧವಳ ಚಾಮರದ ಮೇಲೆಮೆರೆವ ಮೇಘಡಂಬರದ ರಣಕಬಳರಕ್ಕೆ ಮದ್ದುರಗಳ್ಪುದಿದ ಭರಣಿಗಳ ಪೊಸ ಸವಗಸೀಸಕಂಗಳ ಪೆಟ್ಟಿಗಳ ಚಕ್ರಚೀತ್ಕೃತಿಗೆ ಜತಿಗುಡುವ ಮಾಲೆ ಘಂಟೆಯ ಸಾರಿ ನಿಂದ ಧೀರಸಾರಥಿಯ ಸಂಮುಖದೊಳ್ಬಿರುದನುಗ್ಗಡಿಪ ವಂದಿವೃಂದದ ಸಂಭ್ರಮಂ ಬೆರಸು ನಿಂದ ನಿಜರಥಗಳಂ ಬೀರಸಿರಿಯ ಮಣಿಮಂಚಮ ನೇರುವಂತೇಱಿ ಮಣಿಮುಕುಟ ಕಿರಣವಿನರುಚಿಯ ನೊ

ತ್ತರಿಸೆ ಕಲಿತ ಕರ್ಣಾಭರಣ ಕಾಂತಿ ಕಪೋಲದೊಳ್ನರ್ತಿಸೆ ತೊಡೆದ ಯಕ್ಷಕರ್ದಮದ ಕಡುಗಂಪಿಂಗೆ ಮದಾಳಿ ಮೊರೆದೆರಗೆ ಕನಕ ಕವಚ ರುಚಿರ ರುಚಿಯೊಳ್ ಹಾರರುಚಿ ಮಲ್ಲಗಾಳಗಮನೊಡರ್ಚೆ ಭುಜವಲ್ಲರಿಯ ಮಂಜರಿಯ ಸಿರಿಯಂ ಭುಜಕೀರ್ತಿತಳೆದು ತೆರಂಬೊಳೆಯೆ ಪೊಂದೊಡರ ನುಣ್ಗದಿರ್ಚ್ಚರಣಾಂಬುಜಕ್ಕೆ ಪೊಸವಿಸಿಲಂ ಪಸರಿಸೆ ಪಸದನಸಿರಿ ಮಿಸುಗೆ ರಥಾರೋಹಣ ನಿಪುಣತೆಯೊಳ್ಪಾರ್ಥನಂ ಪಳಿವ ಪಾರ್ಥಿವ ಸಮುದಯಂ ಮುದಂದಳೆದೇರಿ ಪನ್ನತಿಕೆಯಿಂ ಪರಿಯಿಪಾಗಳಂ ಬುಧಿಯ ತರಂಗದ ಬೆಂಬಳಿಯೊಳ್ಪರಿವ ವಹಿತ್ರಂಗಳಂತೆ ತುರಂಗದ ಬೆಂಬಳಿಯೊಳ್ಪರಿದು ಪಾಳಿವೆತ್ತ ರಥಂಗಳಿಂ ಮತ್ತಂ, ರಣರಂಗದೊಳಿದಿರ್ಚಿದ ವೀರನಂ ಸದೆದು ಬಿಸುಡುವ ತೊಡಂಕಿದ ವೀರನ ನಡಂಗಿ ಪೊಯ್ವ ವಂಚಿಸಿ ಪಾಯ್ವ ವೀರನಂ ಸಂಚರಿದೆರಗುವ ಕೊಲಗದೆ ನಿಂದವೀರನಂ ತಲೆಗಡಿದುರುಳ್ಚುವ ಮೂದಲಿಪ ವೀರನಂತೌದಲೆಗಾಣಿಪ ಮಾಯದ ವೀರನಂ ನೋಯಲಿರಿದು ಕೆಡಪುವ ಪರಾಕ್ರಮಕ್ಕೆ ಪಕ್ಕಾದ ಡವಣೆವರೆಯ ಕಾಲಸರಪಳಿಯ ಬಾಪುಳಿಯ ಬೊಂಬೆಯ ಭುಜಕೀರ್ತಿ ಮುಖದ ಬೀರಜೇಗಟೆಯ ಬೆನ್ನಚಮರದ ಪಳದಿಯ ಸೀಗುರಿಯ ಪಗಲ್ಕೈದೀವಿಗೆಯ ವಜ್ರದಂಕುಶದ ವಿಜಯ ಪತಾಕೆಯ ಪುಲಿಯುಚರ್ಮದ ಪಲುಬಿಯ ಗರಿಯ ತೋಳಕಚ್ಚಳಿಯ ತೊಂಗಲ್ಘಂಟೆಯ ಜೋಡುಶಂಖದ ಜಗಜಂಪಿನಸತ್ತಿಗೆಯ ಪಲಬಿರುದುಗಳ್ನಿಗಳ್ತವಡೆಯೆ ಘುಡುಘುಡಿಸಿ ಜಡಿದು ಪಿಡಿದಕರವಾಳ ಕಕ್ಕಡೆಯ ಸಬಳದುಲ್ಬಣದ ಕುಂತದ ಕೌಕ್ಷೇಯಕ ದಡ್ಡಣದ ಡಾಯುಧದ ಮುಸಲದ ಮುದ್ಗರದ ಪರಶುವಿನಪಟ್ಟಿಯುದ ಪಾಶದಂಕುಶದ ವಂಕಿಯ ಲೌಡಿಯ ಜವದಾಡೆಯ ಚಾಪದ ಚಕ್ರದ ಶರದ ಶೂಲದ ಶಲ್ಲೆಹದ ಬಲ್ಲೆಹದ ಪೊಡರ್ಪು ಪಡಿತಳಿಸೆ ಸಿಡಿಲಪಡೆ ಕಾಲನ ಕಾಯ್ಪುಗೊಂಡು ಕಟ್ಟಾಳ್ತನಂ ಬೆತ್ತಂತೆ ಮೆರೆದು ನೆರೆದ ಪದಾತಿವ್ಯೂಹದಿಂ ಮತ್ತಂ ಮೊರೆವ ಚಂಬಕವರೆಯ ಮೊಳಗುವ ಪಳಹದಸೂಳೈಪ ನಿಸ್ಸಾಳದ ಪೂರೈಪ ಶಂಖದ ಡಮುಡಮುಮೆಂಬ ಡಿಂಡಿಮದ ಭೋರೆಂಬ ಕಹಳೆಯ ಬೊಬ್ಬಿಡುವ ಬೀರಮದ್ದಳೆಯ ಜತಿಗುಡುವ ತಂಬಟದ ಬೆಂಬಳಿವಿಡಿದ ಬೊಂಬುಳಿಯ ಗಿರ್ರೆಂಬ ಗಿರುಗಟಿಯ ನಿಬಿಡತರ ಪಟುರಟನ ದೊಡನೆ ಘುಡುಘುಡಿಪ ಸುಭಟ ಪಟಲ ಕಳಕಳಂ ರಥಚಕ್ರಚಟುಲ ಚೀತ್ಕಾರಂ ಮತ್ತಮಾತಂಗ ಸಂಘಾತ ಸಮುದಿತ ಬೃಹದ್ಬೃಂಹಿತಂ ತರಂಗೆತರಳ ತುರಂಗ ಸಂಘಹೇಷಾ ಸಮುದ್ಘೋಷಣಂ ಬೆರಸಿ ನಭೋಮಂಡಳಮ ನಳ್ಳಿರಿ ದಳುರ್ಕೆಗೊಳೆ ಸೇನಾರಜಂ ಬಾನಂ ಬಾಸಣಿಸೆ ಕರತಳದೊಳೊರೆಗಳೆದು ಜಳುಂಪಿಸುವ ಕೈದುಗಳ ಬಳ್ಳಿವೆಳಗು ಬಳಸಿ ಬಳೆದು ಕವಲಿರಿದು ಕವಿಯೆ ನೀಲ್ದಪತಾಕೆಗಳ ಪಸರಿಸಿದ ಪಟಪಟಲಂ ಪದ್ಮಸಖರುಚಿಯಂ ಪರಿಭವಿಸೆ ಪೆರ್ಮೆವೆತ್ತು ಕಲ್ಪಾಂತದೊಳ್ಕವಿತರ್ಪ ಕಡಲಂತೆ ಘುಳುಘುಳಿಸಿ ನೆನೆವಮನಕಂ ನೋಳ್ಪಕಣ್ಗಂ ನುತಿಪರಸನೆ ಗಸದಳಮೆನಿಸಿ ಜಗದಗಲಕ್ಕೆ ತೆಕ್ಕನೆ ತೀವಿದ ಚತುರಂಗ ಬಲಮಂ ಚತುರ ಚಮೂಪತಿ ತೋರಿ ದಾಗಳದಂ ಕಂಡು ಕೌತುಕಂಗೊಂಡಾಪುರ್ವಿಗೆ ರಾಜಶೇಖರ ರಾಜೇಂದ್ರ ನೋಜೆಯಿಂ ದಾಜಿಸನ್ನದ್ಧನಾಗಿ ಯಥೋಚಿತ ನೈಪಥ್ಯಂ ದಳೆದ ಮಾತ್ಯಸಮೇತಂ ಪಣ್ಣಿಬಂಧಿಭೇಂದ್ರಮ ನೇರಿ

ಸಮರ ಸಮುಚಿತ ಸಂಭ್ರಮಂ ಮಿಗೆ ಶುಭಮುಹೂರ್ತದೊಳ್ಮಿಬಿರಕ್ಕೆ ನಡೆತರ್ಪಾಗಳ್—

ವೃ॥ ಬಳವದ್ದೋರ್ದಂಡ ದಂಡಾಧಿಪ ಮಿತವಚನಾಮಾತ್ಯರೊಂದೊಂದಿಭೇಂ
ಗಳನಾರ್ಪಿಂದೇರಿ ಪಿಂದೈತರೆ ರವಿಶಶಿವಂಶೋದ್ಭವ ಸ್ಪರ್ದ್ವರೂಥಂ॥ [ದ್ರಂ
ಗಳೊಳೊಪ್ಪಂಬೆತ್ತು ಸುತ್ತು ತ್ತೊಡವರೆ ಚತುರಂ ಚಾತುರಂಗಾನ್ವಿತಂ ಮಂ
ಜುಳ ಖಡ್ಗನ್ಯಸ್ತಹಸ್ತಂ ತಳರ್ದನಹಿತ ಸೇನಾಬ್ಜಸೀ ಕುಂಜರೇಂದ್ರಂ ॥ ೧೨

ವಚನ॥ ಮತ್ತಂ—

ವೃ॥ ಖರಖಡ್ಗಪ್ರಾಂಶು ವಿದ್ಯುದ್ದ್ಯುತಿ ಪರಿಗೆಗಳಂಭೋಧರಂಗಳ್ಗ ಜಪ್ರೋ |
ತ್ಕರ ಶುಂಭದ್ಬೃಂಹಿತಂ ಪೆರ್ಮೊಳಗು ಮಣಿರಥಶ್ರೇಣಿ ಶಕ್ರಾಯುಧಂ ಬಂ ||
ಧುರ ವಾಗುತ್ತಿರ್ಪಿನಂ ತದ್ರಿಪು ಮದದವಮಂ ಸಂದಿಸಲ್ಬರ್ಪ ಕಾರಂ |
ತಿರೆ ಬಂದಂ ಸತ್ಕದಂಬಪ್ರಹಿತ ಕರಕ ವಿಖ್ಯಾತನಾ ಭೂಮಿಪಾಲಂ ॥ ೧೩

ವಚನ॥ ಅಂತು ಬರ್ಪಾಗಳ್—

ವೃ॥ಕಮಠೇಂದ್ರಂ ತೆಕ್ಕೆಗೊಂಡೊಂದಿದ ವಿನಮಿತ ಕಂಠಾಹಿಪಂ ಸಿಂಬಿಯೆಂಬಂ|
ತಮದೋರ್ಪ್ಪಂಬೆತ್ತು ಬೆನ್ನಲ್ಲಿರೆ ಬಲಭರಮಂ ತಾಳ್ದು ಬಾಳ್ದಂ ಪತಾಕಾ ||
ಕ್ರಮಿತಾ ಕಾಶಾಧ್ವದೊಳ್ತತ್ಪಟಪಟಲದೊಳಿಟ್ಟಾಸ್ಯಮಂ ತದ್ರಜಸ್ಸಂ |
ಕ್ರಮ ಜಾತಕ್ಲೇಶಮಂ ಮೇಣ್ಕಳಿದರನಿಮಿಷರ್ನ್ನಿರ್ನ್ನಿಮೇಷಾಕ್ಷಿಗಾಗಳ್ ||

ಕಂ॥ ಬಳವಿಪುಳಕೇತು ತುಡುಕಿದೊ |
ಡಳರ್ದಿಳಿ ತಂದಿಂದು ತನ್ನೃಪಾಲನ ಮರೆಯಂ ||
ಗಳಿಲನೆ ಪುಗಲ್ಕೆ ಬಂದಂ |
ತೆಳಮುತ್ತಿನ ಮೇಘಡಂಬರಂ ಒಗೆಗೊಳಿಕುಂ || ೧೫

ವೃ॥ ಮದಜಳದಿಂದೆ ಮಳ್ಗಿಪುದು ಭೂರಜಮಂ ಗಜರಾಜಿ ವಾಜಿ ಮ |
ತ್ತದನೆ ಖುರಾಗ್ರದಿಂ ನೆಗಪುಗುಂ ಧ್ವಜಪಙ್ಕ್ತಿ ಮುಸುಂಕಿ ಸೂರ್ಯನಂ ||
ಪದೆದೆಳಮುಬ್ಬರ್ ನುಬ್ಬಿಪುದು ಮತ್ತದ ನಾಗಳೆ ಖಡ್ಗಕಾಂತಿ ಪೊ |
ಯ್ಯುದು ಬಳಿಕೆಂದೊಡೇ ಪೊಗಳ್ವೆನಾ ಜಗತೀಶ ಜಯಪ್ರಯಾಣಮಂ ||೧೬

ರಿಪುದುರ್ಗಧ್ವಾಂತ ವಿಧ್ವಂಸನ ಖರಕರನೀ ಬಂದನೀ ಬಂದನಸ್ಯೋ |
ರ್ವಿಪ ಗರ್ವೋರ್ವೀಧ್ರ ಸಂಭೇದನ ಪವಿಧರನೀ ಬಂದನೀ ಬಂದನು ದ್ರಿ ||
ಕ್ತಪರಕ್ಷ್ಮಾಪ ಪ್ರತಾಪೋತ್ಕದಳಕಳಭನೀ ಬಂದನೀ ಬಂದನೆಂದು |
ರ್ವ್ವಿ ಪಟುಪ್ರಧ್ವಾನಮಂ ಬೀರಿದುವು ಕಹಳೆಗಳ್ಮುಂದೆ ವಿಸ್ತಾರದಿಂದಂ || ೧೭

ವಚನ॥ ಮತ್ತಮಾಸೈನ್ಯ ಮುದ್ಯಾನದಂತೆ ಮಹಾಗಜಾತಿ ಶೋಭಿತಮುಂ ರಣಾಜಿರ
ದಂತೆ ಮನೋಗಮನ ವಾಜಿರಂಜಿತಮುಂ ಅಯೋಧ್ಯಾನಗರದಂತೆ ಸಮಾಶ್ರಿತ ಮಹಾದಶರಥ

ಸಮುಂಚಿತಮುಂ ತ್ರಿವಿಕ್ರಮ ಮೂರ್ತಿಯಂತೆ ವಿಮಲಪದಾತಿ ಮಂಡಿತಮುಂ ಘನಾಗಮದಂತೆ ಜಿಷ್ಣುಚಾಪ ಶರಕರಕೋದಂಚಿತಮುಂ ನಭಸ್ಸ್ಥಳದಂತೆ ಸಮುಚ್ಚಾಮರ ಸಮುಂಚಿತಮುಂ ಪೃಥುಳ ಪುರದಂತೆ ವಿಳಿತಘಂಟಾ ಧ್ವನಿ ಕೇತನಾಲಂಬಿತಮುಂ ಸುರಲೋಕದಂತೆ ಮುಕ್ತಾಮಯಾತಪತ್ರಸ್ತಿಮಿತವಿ ಭವಮುಂ ಸಾಮ್ರಾಜ್ಯದಂತೆ ಸಮುತ್ಕೀರ್ಣಧರಾಪರಾಗಮುಂ ಶರಧಿತಟದಂತೆ ಮಹಾಪ್ರಭಾವ ನೀಪಾಲಂಕೃತಮುಮೆನಿಸಿ ಸಡಗರಿಸಿ ನಡೆತಪ್ಪ ಗಳ್—

ವೃ॥ ಇದಿರೊಳ್ಕಣ್ಗೊಪ್ಪಿತಬ್ಜೋದ್ಭವನ ಭವನಮಂ ಮುಟ್ಟಿ ತತ್ಸೃಷ್ಟಿಶಿಲ್ಪ |
ಕ್ಕಿದೆ ಪಾಳಿಸ್ತಂಭಮೆಂಬಂತ ಮರೆ ಸುರನದೀಸುಪ್ರವಾಹಂ ಪಟಂಬೋಲ್ ||
ತುದಿಯೊಳ್ಭಾಸ್ವದ್ವಿಭಾಸ್ವ ನ್ಮುಕುರಮಿರೆ ಸರಿನ್ನಿರ್ಝರಂ ಚಾಮರಂಬೋ |
ಲ್ಪದೆದೊಪ್ಪಂ ಬೆತ್ತು ತೋರುತ್ತಿರೆ ಮಣಿಕಟಕ ಖ್ಯಾತ ಧಾತ್ರೀಧರೇಂದ್ರಂ ||

ವೃ॥ ಕೆಲದೊಳೆ ತಳ್ತು ಮೇವಮುಗಿಲೊಪ್ಪುವ ಕರ್ಣತಳಂ ರದದ್ವಯಂ|
ವಿಳಸಿತವಜ್ರಶೃಂಗೆ ಯುಗಮಂತದರಂತರದಲ್ಲಿ ಬಿಳ್ದ ನೆ ||
ಲ್ದೊಲೆವ ಮಹೋರಗಂ ಕರಮೊಸದ್ದುರ್ಗುವಂಬು ಮದಾಂಬು ಗುಂಡುಗ |
ಲ್ತಲೆ ತನಗಾಗೆ ತದ್ಗಿರಿ ಕರೀಂದ್ರಮದೊಪ್ಪಿತು ಕಣ್ಗೆ ಭೂಪನಾ || ೧೯

ವಚನ॥ ಅನಗದಗ್ರಪ್ರದೇಶದಲ್ಲಿ—

ವೃ॥ ವಿಳಸತ್ಸಂಧ್ಯಾರುಣಪ್ರದ್ಯುತಿಗೆ ರುಧಿರವಿ ಭ್ರಾಂತಿಯಿಂ ಬಗ್ಗವಿಂಡ |
ವ್ವಳಿಕುಂಬಾಯ್ವಿಟ್ಟು ತತ್ಕಾಲ ದೊಳೊಗೆದ ಸರಕ್ತೋಡುವಂ ಬೇಡವೆಕ್ಕೈ ||
ದಳಮಂಕೊಂಡೊಯ್ದು ಕೊಯ್ಯಲ್ಕೆಳಸುವಳೆರವಣ್ಣೆಂದುಶೋಣಾಂಶು ಮಸ್ಮಂ|
ಡಳಮಂ ತಾಳೀಫಲಂ ಗೆತ್ತೆಳಿಸಿ ತುಡುಕುಗುಂ ಬಾಲಶಾಖಾಚರಂಗಳ್ ||೨೦

ಕಂ॥ ಕಟಕಚರ ಕರಟಿ ನಿಜಕಟ |
ತಟ ಕಂಡೂಹರಣ ಸಮುದಪುಷ್ಕರದೆ ನಭ ||
ಸ್ಸ್ಫುಟ ಶಶಿಯ ನಬ್ಜಮೆಂದು |
ತ್ಕಟಿಸಿ ತುಡುಂಕಿದೊಡೆ ತನ್ಮದಂ ಕರೆಯೆನಿಕುಂ || ೨೧
ಹರಿಮಣಿಯರೆ ಯೊಳ್ಮಿರುಗು |
ತ್ತಿರೆ ವೃತ್ತತೆ ವೆತ್ತದಿನಕರೋಪಲ ಮಿದು ಭಾ ||
ಸ್ಕರಬಿಂಬಮೆಂದು ಬಂದಾ |
ಗರಣದ ಸಮಯದೆ ವಿಧುಂತುದಂ ಪಿಡಿವುದದಂ || ೨೨

ವೃ॥ ತಡಿಯೊಳ್ನೀರ್ಗೊಂಬ ಕಾಡಾನೆಗಳ ನಳಿಗಳಿಂ ತಳ್ತಕಂಜಾತದಿಂ ಜಾ |
ಣ್ಬಡೆದೆತ್ತಂ ಕೂಡಿ ಕೋಲಾಹಲಮ ನೆಸೆಪಚಕ್ರಾಳಿಯಿಂ ಪಾಳಿಯಿಂ ಮೆ ||
ಲ್ಪಡೆದೋಪ್ಪುರ್ದ್ವನ್ಮರಾಳಾವಳಿಯಿ ನೊಳಗೆಮೇಲ್ವಾಯ್ವಮತ್ಸ್ಯಂಗಳಿಂಪಂ|
ಪಿಡಿದೊಪ್ಪಿತ್ತಲ್ಲಿ ಫೇನಸ್ಮಿತೆಯೆನಿಸುವಪೊಚ್ಚಂ ಪೊದಳ್ದೊಪ್ಪದಿಂದಂ || ೨೩

ಕಂ|| ನೆಲವೆಣ್ಣ ಗಿರಿನಿತಂಬ |
ಸ್ಥಳಮದುತನಿವೆೞ್ಚೆ ಕೀಳ್ತು ಕೆಲಸೂಸಿದ ಮೇ ||
ಖಲೆಯೆನಿಸಿ ಮೆರೆದುದಂಬೂ |
ಜ್ಜ್ವಲಕಣಮುಕ್ತಾಮನೋಜ್ಞಮಾಸದಿ ಪದಪಿಂ || ೨೪

ವಚನ|| ಮತ್ತಮಿತ್ತರಂ ಬಿಡಿಥೊತ್ತಱಿಸಿ ಕ್ಕಿಬಳೆದ ಮರದುರುಗಲ್ಗಿರ ದೆರಗಿ ಮುಱಿವಕರ ಕರಕಂಜ ನೀರ್ವೊೞ್ಕ್ಕು ನಡುಗುವಂತೆ ತೆರೆವೊಯ್ಲಿಂ ಕಂಪಿಪದರ ಪಡಿನೆಳಲ್ಪಱರಂಜಿಸೆಯುಂ ನಡುವಗೆಲೊಳ್ಕಡುನೀರ ನೊಳೊಡವೆರೆದ ಬಳಲ್ಕೆ ಗಳೆಯುಲೆಳಸಿ ಗಳಲನೊಳಪೊಕ್ಕು ಮೈದೊಳೆದು ನಡುನೀರೊಳೊಗೆದ ನಳಿನಮಂ ಮುಱಿಯುಲೆಳಸಿ ಮಗುಳ್ದು ತೆರೆವಿಡಿದೀಸು ವೆಳೆವೇಡಿತಿಯ ಗುರುತರ ನಿತಂಬ ಬಿಂಬಮಂ ಮುಳುಂಗಿತೋರ್ಪ ಕರಿಣಿಯ ಶಿರಂಗೆತ್ತು ತುಡುಂಕಲೊಡೞ್ಚೆ ತಡಿಯೊಳ್ನಿಂದು ನಿಳ್ಕಿ ನೀಡಿದ ಮದಗಜದ ಕರದ ಮಾರ್ಪೊಳಪು ನಿಜಸ್ವಚ್ಛತೆಯಿಂ ರಸಾತಳದಹಿ ಕಣ್ಗೆ ಕಾಣಿಪಂತೆ ಕಮನೀಯಮಾಗೆಯುಂ ಪುಳಿನತಳದೊಳೆಣೆವಕ್ಕಿಗಳುಡಿದುಡಿದು ಸೂಸಿದ ಮೃದು ಮೃಣಾಳ ನಾಳತಂತು ಜಾಲಕದೊಳೊಯ್ಯ ನೊಯ್ಯನೆ ರಯ್ಯಮೆನೆ ನಡೆವೆಡೆಯೊಳಡಿ ತೊಡಂಕಿ ತಡೆಗೆಡೆವ ತರುಣ ಮರಾಳಂಗಳಂ ಕಂಡು ಗಹಗಹಿಸಿ ನಗುವಂತೆ ಘುಳುಘುಳಿಸಿ ನೊರೆವಿಂಡು ಪಸರಿಸೆಯುಂ ಮಾಸೆವ್ರ್ಪೊಳೆ ಪರಿಯುಡುಗದಸಿರಿಯ ನೊಳಕೊಂಡು ಭೂಮಂಡಲಕ್ಕೆ ಮಂಡನಮೆನಿಸಿ ರಂಜಿಸಿಪ್ಪುದದರ ತೀರದಾ ಮಣಿಕಟಕನಗೇಂದ್ರ ಕಟಕದೊಳ್ನರೇಂದ್ರ ಕಟಕಂ ಪಾಳಿಯಿಂ ಪಾಳೆಯಂ ಗೈದು—

ಕಂ|| ಚತುರಂಭೋನಿಧಿ ವರೆಗಂ |
ಚತುರಂಗಬಲಂ ಪೊದಳ್ದು ಬಿಡೆ ಪದ್ಮಜನೇಂ ||
ಚತುರನೊ ತೆದಾಶ್ಚರಮು ನಹಿ |
ಪತಿ ಪೊರಲೆಂದಂದೊಡೞ್ಚೆದಂ ಬಹುಶಿರಮಂ || ೨೫

ವಚನ|| ತನ್ಮಧ್ಯದೇಶದಲ್ಲಿ—

ಕಂ|| ಪಳದಿಯ ಪಜ್ಜೆಯ ಪಟ್ಟೆಯ |
ತಳಿರ್ವಟ್ಟೆಯ ಗುಡಿಗಳೊಡನೆ ಬಳಸಿರೆ ಕಣ್ಗೇಂ ||
ತೊಳಗಿದುದೊ ನಡುವೆ ತನ್ನೃಪ |
ತಿಳಕನ ನಲ್ಮೆಸುನಿ ವೆಸದ ಪೊಸಗೂಡಾರಂ || ೨೬

ವಚನ|| ಅಂತದರೊಳಾಕುಮಾರಂ ವಸಿಯಿಸಿರೆ ಯಿರೆ—

ಕಂ|| ಆಸೇನಾರಜದಿಂ ಪರಿ |
ಧೂಸರ ಮಾದುರು ನಿಜಾಂಗಮಂ ತೊಳೆಯಲ್ಕೆಂ ||
ದೋಸರಿಸದೆ ಪೊಕ್ಕಂತಿರೆ |
ವಾಸರ ಕರನಪರವಾರಿನಿಧಿಯೊಳ್ಪೊಕ್ಕಂ || ೨೭

ವಚನ|| ಆಗಳ್—

ವೃ|| ಒಗೆದಿಂದ್ರಾಶಾದ್ರಿಯೆಂದೆಂಬ ತುಳಪವಿಮಯಸ್ತಂಭದೊಳ್ಸಂಜೆಯೊಳ್ಕೆ |
ಟ್ಟಗಿದಿರ್ಚ್ಚಿರ್ದ್ದಂಧ ಕಾರಾಸುರನನಡಸಿ ಸೀಳ್ದೊತ್ತಿ ಪಾಯ್ದೊಳ್ಗದಿ ಕರ್ಚ್ಚ||
ರುಗುರಿಂ ರಕ್ತಾಂಬುವಿಂ ತಾಂ ನನೆದನೆನಿಸಿ ಕೆಂಪೇರಿ ನೃಜಾಂಶು ರಕ್ತಂ |
ಭಗಣಂ ತತ್ಸೀಕರಂ ಬೋಲ್ಮೆರೆಯೆ ಶಶಿನೃಸಿಂಹಂ ಕರಂ ಕಣ್ಗೆವಂದಂ || ೨೮

ವಚನ|| ಇಂತೊಗೆದ ಯಾಮಿನೀ ಪ್ರಥಮಯಾಮದಲ್ಲಿ—

ವೃ||ಶಿವಪಾದಾಂಭೋಜಮಂ ಪೂಜಿಸಿ ಸಚಿವಸಮೇತಂ ಮಹಾಭಕ್ತಿಯಿಂ ಭ|
ದ್ರವಿಳಾಸಂ ಬೆತ್ತು ನಾನಾರಣಕರಣ ಜಯೋದ್ಯೋಗಪೂಗಪ್ರಸಂಗೋ ||
ತ್ಸವದಿಂ ಮಾತಂಗ ವಾಜಿಪ್ರಕೃತಿ ವಿತತಸಲ್ಲಕ್ಷಣಾಲಾಪದಿಂ ಶ |
ಸ್ತ್ರವಿಶೇಷಾಸ್ತ್ರ ಪಂಚಪ್ರವಚದೆ ನಿಶಿಯಂ ನೂಂಕಿದಂ ಮಂತ್ರಲಕ್ಷ್ಮಂ || ೨೯

ಕಂ|| ಮನಸಿಜನಿಭಂಗೆ ಸತ್ಯೇಂ |
ದ್ರನರೇಂದ್ರತನೂಭವಂಗೆ ಪೂರ್ವಾಂಗನೆ ಪೆಂ ||
ಪಿನೊಳೆತ್ತಿದ ವಿಜಯಾರತಿ |
ಯೆನೆ ಕೆಂಪಿಡಿದರ್ಕಬಿಂಬ ಮುದಯಿಸಿತಾಗಳ್ || ೩೦

ವಚನ|| ಆಸಮಯದೊಳಾರಾಜಶೇಖರಂ ರಾಜಶೇಖರಪೂಜೆಗೈದು ಯಥೋಚಿತ ಪ್ರಾತರಾಚಾರಮಂ ನಿರ್ವರ್ತಿಸಿ ವಿತತವಚನ ನೊಡನೇಳ್ದು ನಡೆಗೊಂಡು ದಂಡನಾಥ ಮುಖಮಂಡಳಮಂ ನಡೆನೋಳ್ಪುದುಂ ತದ್ಭ್ರೂವಿಕ್ಷೇಪಣ ಪ್ರೇರಿತಂ ಮೇಘನಾದ ನಾದರದಿಂ ಬಂದು ಸಮರ ಸನ್ನಾಹಭೇರಿಯುಂ ಪೊಂಗುಡುಪಂ ಪಿಡಿದಡಿಸಿ ಪೊಡೆಯಲೊಡನೆ—

ವೃ|| ದಿಗಿಭಂಗಳ್ಕಡುಬೆರ್ಚ್ಚೆ ಕರ್ಚ್ಚೆ ರಿಪುವರ್ಗಂ ಪುಲ್ಗಳಂ ತಾಯ್ಮಣ |
ಲ್ಕೆಗೆವಂತಬ್ಧಿ ತುಳುಂಕೆ ಶಂಕೆ ಮಿಗೆ ದಿಕ್ಪಾಲಕ್ಕರಂ ಬಳ್ಕೆ ಪ ||
ನ್ನಗರಾಜಂ ಪೆಡೆತಗ್ಗೆ ಕುಗ್ಗೆ ಕುಳಭೂಭೃನ್ಮಸ್ತಕಂ ಸೀಳೆ ಧಾ |
ತ್ರಿಗೆ ತಾಂ ಪರ್ಬ್ಬಿದುದುರ್ಬ್ಬಿ ದಾಂಥಳಧಳ ಸ್ಫಾರೋರುಭೇರೀರವಂ || ೩೧

ಕಂ|| ಆರವಮಂ ಜಳಧರದ ಮ |
ಹಾರವಮುಂ ಕೇಳ್ದು ಸಿಂಹದಂತಿರೆ ಕೇಳ್ದಾ ||
ಧೀರೋತ್ತಮ ಸಿಂಹಳಧರ |
ಣೀರಮಣಂ ಕೆರಳ್ದು ನೋಡಿದಂ ನಾಲ್ದೆಸೆಯಂ || ೩೨

ವಚನ|| ಅಂತು ನೋಳ್ಪಾಗಳ್ನಿಜಸಭಾಸದರೆಲ್ಲರದ್ಭುತಕ್ರಾಂತ ಸ್ವಾಂತರಾಗಿರ್ಪ್ಪಿನ ಮೊರ್ವ್ವಚರಂ ತ್ವರಿತಗತಿಯಿಂ ಬಂದು—

ಕಂ|| ದಡದಡಿಪಡಿ ಪಡಿಮಾತಂ |
ಪಡೆಯಲೊಡಚ್ಚುರ್ಗವ ಮನಂ ತಡಂಬಡಿಪ ತಳ ||
ನ್ನುರ್ಡಿ ಯಡಿಗಡಿಗೊಡ ನೊಡನಿ |
ಟ್ಟಡೆ ಗೊಂಡಿರೆ ಸುಡಿದನಾಗಳಾಚರಮುಖ್ಯಂ || ೩೩

ವೃ|| ಎಲೆ ಎಲೆದೇವದೇವ ಪಿರಿದದ್ಭುತ ಮದ್ಭುತ ಮೇನ ನೆಂದಪೆಂ |
ನೆಲನಿರದೀದುದೋ ದೆಸೆಯೆ ತಾಂ ಬೆಸಲಾದುದೊ ಪೆತ್ತುದೋ ನಭಂ ||
ಬಲಮಿದೆ ಬಂದುದದ್ರಿ ಪುಡಿಯುಪ್ಪಿನ ಮುಗ್ಗದರಣ್ಯ ಮೆಲ್ಲಮುಂ |
ನೆಲಸರಿಯಪ್ಪಿನಂ ಘನತರಂಗಿಣಿ ಪಂಕಿಲ ಮಾಗುತಿರ್ಪ್ಪಿನಂ || ೩೪

ವಚನ|| ಅದೆತ್ತಣದೆಂಬುದು ಮಾತನಿಂತೆಂದಂ—

ವೃ|| ಚತುರಂಭೋಧಿ ಬರೀತ ಭೂತಳದ ಭೂಪರ್ಕಪ್ಪಮಂ ತರ್ಪ್ಪರು |
ದ್ಧತ ವೃತ್ತಪ್ರಭ ವಿಷ್ಣು ಸಿಂಹಳನದೆಂದುಂ ತೆತ್ತನಲ್ತೆಂದು ಪೇ ||
ಳೆ ತದುದ್ಯದ್ಗಣಕಾಳಿ ಕೇಳ್ದು ಕೆರಳ್ದು ಸತ್ಯೇಂದ್ರ ಚೋಳೇಂದ್ರ ಚಂ |
ದ್ರ ತನುಪೋದ್ಭವ ರಾಜಶೇಖರ ನರೇಂದ್ರಂ ಬಂದಪಂ ಭೂಮಿಪಾ || ೩೫

ವಚನ|| ಎಂಬ ಮಾತಂ ಕೇಳ್ದತ್ಯಂತ ಕೋಪಾರೂಢನಾಗಿ—

ಕಂ|| ಕುಡಿನಿಮಿರ್ದಪುರ್ಬು ಕುಣಿವು |
ತ್ತೊಡನಿರೆ ನೆರೆ ಮುರಿದು ಮಿಾಸೆಯುಂ ಕಣ್ಗಳ ಕೆಂ ||
ಗಿಡಿ ಸಂಲಿಡೆ ಕರವಾಳಂ |
ಜಡಿದೆಂತೆಂತೆಲವೊ ಮುಗುಳ್ದು ಪೇಳೆನುತೆಳ್ದಂ || ೩೬

ವಚನ|| ಅಂತೆಳ್ದು ನೆಲನದಿರೆ ಗಜರಿ ಗರ್ಜಿಸಿ—

ಕಂ|| ತಾಂಗಡ ಶೂರಂಗಡ ಕ |
ಪ್ಪಂಗೊಡೆ ನಾಂ ಗಡ ಕನಲ್ದು ಬರ್ಪ್ಪಂಗಡ ಯು ||
ದ್ಧಂಗಡ ಗೆಲ್ವಂಗಡ ಬಳಿ |
ಕಂ ಗೆಲದೇಕಿರ್ಪ್ಪ ನಿರ್ಪ್ಪನಮುಮ ಸಮರ್ಥಂ || ೩೭

ವೃ|| ಲಾಳನ ನಿಕ್ಕಿ ಮಾಳವನನಳ್ಕಿಸಿ ಘೂರ್ಜರನಂ ಪೊರಳ್ಚಿ ಪಾಂ |
ಚಾಳನನೊತ್ತಿ ಮಾಗಧನ ನರ್ದಿಸಿ ಕೊಂಕಣನಂ ತೆರಳ್ಚಿ ನೇ ||
ಪಾಳನನಟ್ಟಿ ಕೇರಳನನೋಡಿಸಿ ಬರ್ಬರನಂ ಕಲಂಕಿದೀ |
ಚೋಳನ ಚೆನ್ನಪನ್ನತಿಕೆಯುನ್ನತಿ ಕೊಳ್ವುದೆ ಸಿಂಹಳೇಂದ್ರನೊಳ್ || ೩೮

ವಚನ|| ಎಂದು ಮತ್ತಮಿಂತೆಂದಂ—

ವೃ|| ನಿಜಭುಜದರ್ಪವಮಂ ಮುರಿವೆನೆನ್ನದಟಂ ತವೆ ತೋರ್ಪೆನಾಂತತ |
ದ್ಧ್ವಜಿನಿಯನಿಕ್ಕಿ ಭೂತಗಣ ಕೌತಣಮಂ ಮಿಗೆ ಮಾಳ್ಪೆ ನಪ್ಸರೋ|ಂ ||
ಬುಜ ಮುಖಿ ಯರ್ಕಳಿಷ್ಟಮ ನೊಡರ್ಚುವೆ ನಾಗೆಸದೊಳ್ನಿರೀಕ್ಷಿಪ |
ಬ್ಜಬಭವನಕ್ಷಿಗಳ್ಗೆ ನವಕೌತುಕವಂ ರಣದೊಳ್ನಿಮಿರ್ಚುವೆಂ || ೩೯

ವೃ|| ಇಂತೆಂದತ್ಯಂತ ರೋಷಾವೃತ ಮತಿಯದಟಿಂದೆಳ್ದು ಭೇರೀರವಂ ದಿ|
ಕ್ಕಾಂತಾಸ್ವಾಂತಾತಿ ಭೀತಿಪ್ರದ ಮೆನಿಸೆ ತದಂಭೋಧಿಯಿಂ ದಬ್ಧಿಯೊಂ ದೆ||
ಳ್ದಂತುದ್ಯತ್ಸೇನೆ ಕೋಲಾಹಲ ಮನೆಸಗಿ ಕೂಡಿರ್ಪಿನಂ ಕೂರ್ಪಿನಿಂ ಭೂ |
ಕಾಂತವ್ರಾತಾವೃತಂ ಪೆರ್ವಡಗನಡರ್ದು ತತ್ಸಂಯುತಂ ಬಂದನಾಗಳ್ ||೪೦

ವಚನ || ಅಂತೆಳ್ತಂದಪರಿಮಿತ ಬಲಜಲಧಿ ಜಲಧಿಯಂ ಕಳಿದು ನೆಲನೆಲ್ಲಮ ನಳುರ್ಕೆ ಗೊಂಡು ಘುಳುಘುಳಿಸಿ ರಯದಿಂಪರಿತಪ್ಪಾಗಳ್—

ವೃ|| ದಿಗಿಭಂಗಳ್ಬೆಗಡೊಂದೆ ಭಾನುರಥದಶ್ವಂ ಬೆರ್ಚೆ ಪಾತಾಳ ಪ |
ನ್ನಗರಳ್ಕುತ್ತಿರೆ ಖೇಚರರ್ಬೆದರೆ ಮತ್ತೇಭಪ್ರತಾನಂ ತುರಂ ||
ಗಗಣಂ ತೇಗ್ಗರ್ಳ ಪಜ್ಕ್ತಿ ಪಾದಚರಬೃಂದಂ ಬೃಂಹಿತಂ ಹೇಷಿತಂ |
ಪ್ರಗೆತಂ ಚೀತ್ಕೃತಿ ಬೊಬ್ಬೆಯುಬ್ಬಿರೆ ಕರಂ ಸಾಲ್ಗೊಂಡದೇಂ ಬಂದುದೋ ||

ಖರರುಚಿ ಬಿಂಬಮಂಬರ ಧುನೀ ತರುಣಾಂಬುಜದಂತೆ ತೋರೆ ವಿ |
ಸ್ಫುರಿತ ಪತಾಕೆ ಮೇಲಲೆಯ ಸೂಸುತೆ ಪರ್ಬಿದ ತದ್ರಜಕ್ಕೆ ತಾಂ ||
ದೊರೆಯೆನಿಸುತ್ತೆ ಸುತ್ತಿಡಿದು ಸಾಸಿರ ಕಣ್ಬುಗೆ ಸೈನ್ಯ ರೇಣುವಿಂ |
ದಿರ ನಿರದಂತರಿಂಬಲವಿರೋಧಿ ಸಮಾಹ್ವಯ ಮಾಂತವಾಗನೇ || ೪೧

ಕಂ|| ಗಗನಗಹನದೊಳೆ ಗಮಿಪ |
ಖಗಕ್ಕೆ ಪತ್ತೀಂದ್ರ ಧೀವರಂ ಬೀಸಿದ ರೇ ||
ಣುಗಣನವಜಾಲ ಕೊಳಗಾ |
ಯ್ತೊಗುಮಿಗೆಯಿಂ ದನಿಮಿಷಪ್ರತಾನಂ ಚಿತ್ರಂ || ೪೨

ವಚನ|| ಅಂತೆಳ್ತಂದದ್ಭುತಂಮಿಗೆ ತತ್ಸೈನ್ಯಮ ನತಿದೂರದೊಳಿದಿರ್ಚಿಬಿಟ್ಟಿರ್ದುದು ಮುಭಯಬಲಚಮೂಪತಿ ನಿಯಾಮಿತ ಸ್ಸಮರಸನ್ನಾಹ ಭೇರಿಯಂ ತಂತಾಪ್ರದ್ಯಕ್ಷರ್ಕ್ಕಡಂಗಿ ಪೊಡೆದಾಗಳ್

ಕಂ|| ಬಳೆದು ನೆಗೆತಂದು ದಾಂಧಳ |
ಧಳಂಧಳಧ್ವನಿಯಳುರ್ಕೆಗೊಳೆ ಶಬ್ದಗುಣಂ ||
ತಿಳಿವೊಡದಕಾಯ್ತು ಗಗನ |
ಸ್ಥಳಿಗಲ್ಲದೊಡಲ್ಲಿ ಶಬ್ದಮೇಂ ಸಮನಿಕುಮೇ || ೪೪

ವಚನ|| ಅನಂತರ ಮಿಂತಳವಿಗಳಿದ ಕಳಕಳವು ನೆಳಕೊಂಡೊಡ್ಡಿನಿಂದುಭಯಬಲದೊಳು ಭಯಬಲಾಧ್ಯಕ್ಷರ್ಕಡಂಗಿ ಕೈವೀಸಿದಾಗಳ್ ಪ್ರಚಂಡಪ್ರತಾಪಮಂಡಿತ ರುದ್ದಂಡ ಕೋದಂಡ ದಂಡಮನಡಿಸಿ ಪಿಡಿದು ಜೇವೊಡೆದು ಪಿಂಗದ ಮುಂಗಡೆಗಾಂತ ತರಿಸಂಜು ನಿಂದು—

ಕಂ|| ಡೊಣೆಯಿಂ ಕಣೆಯಂ ತೆಗೆತೆಗೆ |
ದಣಿಯರ ಮೆನೆ ಪೂಡಿ ನೋಡಿ ಗುರಿಯಂ ಮಣಿಕಾ ||
ಲ್ಮಣಿಯೆ ಭುಜಮೊಗೆಯೆ ಕುಂಡಲ|
ಮಣಿ ಕುಣಿಯೆ ಧನುರ್ಧರರ್ಕಳದಟಿಂ ದೆಚ್ಚರ್ || ೪೫

ಕಂ|| ಹುಂಕೃತಿ ಬಿಲ್ಗಾರರ ಗುಣ |
ಠಂಕೃತಿ ಚಾಪಪ್ರಮುಕ್ತಶರನಿಕರ ಮಹಾ ||
ಭೀಂಕೃತಿ ನೋಳ್ಪಮರರ್ಗೆ ಭ|
ಯಂಕೃತಿ ಗೈದುದು ತದೀಯ ರಣಭೂತಳದೊಳ್ || ೪೬

ನೆರೆ ನುಚ್ಚಿ ಪಾಯ್ದು ನೆತ್ತ ||
ತ್ತರ್ಗುರುಗೆ ಪರಿಕ್ಷುಬ್ಧಬಲ ಜಲಧಿಯೊಳ್ಕೆಂಬಾ ||
ವುರೆ ಮೊರೆದು ಪರಿವತೆರದಿಂ |
ಗರಿಗಣೆ ನೆರೆ ಮೊರೆದು ಪರಿದು ಮೆರಡುಂಬಲದೊಳ್ || ೪೭

ಅಂಬೆರ್ದೆಯನುಚ್ಚೆ ಕೀಳ್ವ ದ |
ರಿಂ ಬಳಿಕೆಚ್ಚವನ ನೊರ್ವನಿಸೆ ಕೊಂದುದು ತಾ ||
ನೆಂಬಾ ಗಳಾತನಂ ಗುಣ |
ಮಂ ಬಿಟ್ಟತಿ ಚಪಳರಲ್ಲಿ ಗುಣಮುರಸುವುದೇ || ೪೮

ಅರಿಗಳ ಸುಪವನಸಂ ತಾ |
ನಿರದೊಳಕೈದಾಶು ಗತ್ವಮಂ ಪ್ರಕಟಿಸಿದ ||
ತ್ತರರೆ ಶರಮನ್ಯರೊಡ ನೊಂ |
ದಿರೆ ಶದ್ಧರ್ಪಂ ಧರಿತ್ರಿಯೊಳ್ಪೊರಕೊಳದೇ || ೪೯

ವೃ|| ಎಡೆಯೊಳೆ ಬರ್ಪ ಬಾಣಮನೆ ಖಂಡಿಪ ಚಾಪಮನೆಚ್ಚು ತೊಟ್ಟನಿ |
ರ್ಕಡಿಯನೆ ಮಾಳ್ಪ ತೊಟ್ಟಬೆರಲಂ ತವೆ ತುಂಡಿಪ ಬಿಲ್ಲಬಿನ್ನಣಂ ||
ಬಿಡದೆಡೆಗೊಂಡ ಧನ್ವಿಚಯ ಮೆಚ್ಚೊಡೆ ಪಾಯ್ದುದು ಪಾರಿದತ್ತು ತ |
ಳ್ತಡಸಿದುದುಚ್ಚಿ ನಟ್ಟುದೊಡ ನಿಕ್ಕಿದುದು ಕ್ಕಿದಶೂರರಂ ಶರಂ || ೫೦

ಕಂ|| ತಳಿರೊಡೆದಸುಗೆಗಳೊ ದವಾ |
ನಳನಡಿಸಿದ ಪಾದಪಂಗಳೋ ಪೇಳೆನೆ ಕಂ ||
ಗೊಳಿಸಿದ ರುರುಶರಹತಿ ಪರಿ |
ಗಳಿತ ಕ್ಷತ ಜಾತ ಕಲಿತ ಕಾಯುರಜೇಯರ್ || ೫೧

ವಚನ|| ಇಂತು ಕಡುಗಲಿತನಂ ಕೈಮಿಕ್ಕು ಕಾದುವ ಧನುರ್ಧರರ ಕಡುಪಂ ಕಂಡು ಕಡು ವಹಿಲದಿಂ ಕಾಯ್ದೇರಿ ಖಡ್ಗಮಂ ಪಿಡಿದೊಡ್ಡುಗೊಂಡಡ್ಡಣ ಕಾರರಾದ್ದು ಸಾದ್ದು ಸಂರಂಭಸಂಭ್ರಮು ಮಿಂಚುವಡೆಯೆ ತಡೆಯದೆ ಪಡಿತಳಿಸಿ ಗೊಂದಣಿಸಿ ನಿಂದು—

ಕಂ|| ಪೊಡೆಯೆ ಕಡಿವಡೆದ ರುಂಡಮು |
ನೆಡಗೈಯಿಂದಡಸಿ ಪಿಡಿದು ಬಿಡದುದ್ಧರಿಸು ||
ತ್ತೊಡನೆ ನಡೆದಿಕ್ಕಿದ ಸನಿ |
ರ್ಕಡಿಗೈವದಟಕ್ಕರ್ಳಮರರಂ ಮಚ್ಚಿಸಿದರ್ || ೫೨

ವಚನ|| ಅದಲ್ಲದೆಯುಂ—

ವೃ|| ಕರತಳಖಡ್ಗಮಂ ಜಡಿದು ಪಾಂಗರಿದಡ್ಡಣ ಮೊಡ್ಡಿ ನಿಂದು ಖೇ |
ಚರರರಿದೆಂಬಿನಂ ಪೊಡೆವ ಪೊಯ್ಮ ತರುಂಬುವ ಥಟ್ಟುಮೊಳ್ಪಮುಂ ||
ಬರಿವ ಮರಳ್ದುಮಬ್ಬರಿಪ ಗರ್ಜಿಪ ಬೊಬ್ಬಿರಿವೊರ್ವ ಪೋರ್ವಮೊ |
ಗ್ಗರಿಪ ತೊಡಂಕುವ ಗ್ಗಲಿಪೆಬಿನ್ನಣಮೊಪ್ಪೆ ಕಡಂಗಿ ಕಾದಿದರ್ || ೫೩

ವಚನ|| ಮತ್ತಮಲ್ಲಿ—

ಕಂ|| ಅಡ್ಡಣಮೊಡ್ಡಿದ ಕಾಮರ್ಗಿ |
ಲೊಡ್ಡಣ ಮಿರದಿರಿದು ವಂಚಿಪಸಿ ಮಿಂಚುವ ಮಿಂ ||
ಚೆಡ್ಡಮೆನಿಸಿರೆ ಸಿಡಿಲ್ವಡೆ |
ಯೊಡ್ಡನೆ ಘುಡುಘುಡಿಸಿ ಕಾದಿದಕ್ಕಲಿಸುಭಟರ್ || ೫೪

ಕರವಾಳ್ಮುರುಮೊನೆ ಗೊಂಡು |
ಚ್ಚರೆ ಬೆನ್ನೊಳ್ಮೂಡೆ ನಡೆದು ತೊಡರ್ದಿರೆ ಬಿಡದೊ ||
ರ್ವರೊಳೊರ್ವರ್ಮುಷ್ಟೀ ಮು |
ಷ್ಟಿರಣಂ ನೆಗೆಳ್ದುದು ನಖಾನಖಿ ಸ್ಫುಟಯುದ್ಧಂ || ೫೫

ಕರತಳದ ಹರಿಗೆ ಕವಿದೊ |
ಪ್ಪಿರೆ ಕಪ್ಪರದಂತೆ ಮೇಲೆ ಬಲರೇಣು ಧರಾ ||
ಭರಮಂ ಪೊರಲುಜ್ಜುಗಿಪು |
ದ್ಧುರ ಕೂರ್ಮನನೊರ್ವ ನಡಿಯೊಳನುಕರಿಸಿರ್ದಂ || ೫೬

ಕರುಳದು ಪೊಡೆಯಿಂ ಪೊರಸೂ |
ಸಿರೆ ಸೂಸದೆ ಶೌರ್ಯಮುರ್ವಿ ಕರವಾಳಿಂ ಪೊ ||
ಯ್ದರಿಯ ಸಿರಿದಿಕ್ಕಿ ಮಿಕ್ಕ |
ರ್ಕರುಳಿಲ್ಲದ ಕಲಿತನಕ್ಕೆ ಪಕ್ಕಾಗಿರ್ದರ್ || ೫೭

ವಚನ|| ಆಗಳಂತದಂ ಕಂಡು ಸಮರಸಮುತ್ಸುಕಾಂತರಂಗಿಗಳುತ್ತರಂಗಿಗಳುತ್ತುಂಗ ತುರಂಗ ಸಂಘಮಂ ಪಿಂಗದೆ ಮುಂಗಡೆಗೆ ಸಂಗಡಿಸು ಕೂಡನೆ ಘುಡುಘುಡಿಸಿ ತೊಡವುಡಸನ್ನೆಯಿಂ ದೌಂಕಿ ನೂಂಕಿದಾಗಳ್—

ಕಂ|| ಕುಳಿಗೊಳಿಸಿ ಕೊಳಗಿಸಿಂ ಕೊಳು |
ಗುಳದಿಳೆಯುಂ ಸೆಗಪಿ ಮಿಗೆ ತದುದ್ಧ್ರಜಮುಂ ಬಾಂ ||
ಬೊಳೆಯುಂ ಕದಡೇಳಿಸಿ ಮೇ |
ಣ್ಕೆಳಿರ್ದತಿರಯದಿಂದೆ ಪರಿದುವಲ್ಲಿ ಹಯಂಗಳ್ || ೫೮

ವಚನ|| ಅಂತುಮಲ್ಲದೆಯುಂ—

ಶರಧಿಮಥನದೊಳೆ ನೊರೆಗಳ |
ನೆರವಿಸು ನಿರೂಾಂತು ಪರಿವ ತೆರೆಗಳ ಸಿರಿಯುಂ ||
ಧರಿಸಿ ಪರಿದುದು ತುರಂಗೋ |
ತ್ಕರಮೂ ನನ ಫೇನ ಖಂಡಷಂಡದಿ ನಾಗಳ್ || ೫೯

ಬಟ್ಟಜೆಯಿಂ ಪೆಗಲೊಳ್ತೆಗೆ |
ದಿಟ್ಟ ಗ್ಗದಪಟ್ಟೆಯಂಗಳಂ ಜಳುಪಿಸಿ ಬೊ ||
ಬ್ಬಿಟ್ಟಡಸಿ ಪೊಕ್ಕು ಮಿಕ್ಕಾ |
ದ್ದಿರ್ಟ್ಟಣಿಸಿ ಪಳಂಚಿದತುರ್ರಂಗಿಗಳದರೊಳ್ || ೬೦

ಕಿಡಿಗೆದರ್ವ ಕಣ್ಗಳೆತ್ತಿದ |
ಕಡುಗಂ ಕಡುಗಚ್ಚಿದೌಡು ಗಂಟಿಕ್ಕಿದಪು ||
ಬ್ಬರ್ಡಿಗಡಿಗೆ ಕುಣಿವ ಮೀಸೆಗ |
ಳೊಡನೊಡನೆ ಭಯಾವಹಂ ಹಯಾರೋಹಕರಾ || ೬೧

ವೃ|| ಒಡೆದುಡಿವಂತೆ ಪೊಯ್ದು ಕರಖೇಟಕಮಂ ಪೊಡೆದಿಕ್ಕಿ ಸೀಸಕಂ |
ಪುಡಿಪುಡಿಯಪ್ಪಿನಂ ಕಡಿದು ಕಂದಮನಿಕ್ಕಡಿಗೈದು ವಾಜಿಯಂ ||
ಸಿಡಿಯೆ ಶರಂಕರುತ್ತು ತರಿದಬ್ಬರಿಸುತ್ತತುಳಪ್ರತಾಪವೊ |
ಗ್ಗಡಿಸಿದ ಪೋಲ್ತುರಂಗಿಗಳೆ ರಳ್ಬಲದೊಳ್ಕಡುಪಾಂತು ಕಾದಿದರ್ || ೬೨

ಕಂ|| ಎರಡುಂಬರಿಗಳ ಪೊಂಬ |
ಕ್ಕರಿಕೆಗಳೊಳ್ತುರುಗಿ ನಟ್ಟಗರಿಗಣೆ ಗರಿಯಂ ||
ತಿರೆ ಪುರುಷೋತ್ತಮು ರೇರಿದ |
ತುರಂಗತತಿ ಗರುಡಬಳಮ ನೇನಿಳಿಸಿದುದೋ || ೬೩

ನಿಡುನೇಜೆಯ ದಿಸದೊರ್ವ್ವಂ |
ಜಡಿದಿರಿದೆತ್ತಿ ದೊಡೆ ಪತ್ತುವಂ ಕರವಾಳಿಂ ||
ಪೊಡೆದಂ ಮೇಗಣಿನಾ ಮೊನೆ |
ಎಡಿದಿಳಿ ತಂದವನ ನಾತುರಂಗಸಮೇತಂ || ೬೪

ವಚನ|| ಅಲ್ಲಿ ನಡೆಸೂಲಂಗಳಂ ಪಿಡಿದುನಡೆವಂತೆ—

ಕಂ|| ನೇಜೆಯದಿಂದಿರಿದೆತ್ತಿ ನಿ |
ಜಾಜಮನೆ ಬಿಡಾಜಸರ್ಗೆ ತೋರ್ಪಂತೆ ಸುಹೃ ||
ದ್ರಾಜಿಯನೆ ವಾಜಿವಾಹಕ |
ರಾಜಿ ಮಹಾಜಿಯೊಳೆ ತಳದುರ್ದದದ್ಭುತ ಮೊಗೆಯೊಲ್ ||೬೫

ವಚನ|| ಇಂತು ತಕ್ಕುಗೆಡದೆ ಮಿಕ್ಕು ಪೊಕ್ಕು ಪೊಣರ್ವ ಸಗರ್ವ ಗಂಧರ್ವ ವಾಹಕ ಸಮೂಹದ ಸಾಹಸ ದಾಹವದ ಮೋಹರಮಂ ಕಾಹುರದ ಮೋಡಿಯಿಂ ನೋಡಿ ನೀಡುಂ ತೋಡಿಲ್ಲದ ಪಾಡು ಪಂತಂಗೊಂಡು ಸಮ್ಮದಂ ಮಿಗೆ ಸಮ್ಮುಖದ ಧೀರಸಾರಥಿಯಂ ಪುರ್ಬಿಂ ಜಬ್ಬಿ ಜವಂಗೆಡದುಭಯ ಬಲವರೂಥಿಗಳ್ವಿಜಯ ವರೂಥ ಯೂಥಂಗಳಂ ಪಿಂಗದೆ ಮುಂಗಡೆಗಾಂತಿದಿಚ್ಚೆ ಸಾಚ್ಚೆ ಪರಿಯಿಪಾಗಳ್—

ವೃ|| ಕಾಲನ ಕಲ್ಲಗಾಣದ ಸಮುದ್ಗತಚೀತ್ಕೃತಿಯಂತೆ ಪೊಣ್ಮೆ ಪೆ |
ಗರ್ಗಲಿಯ ಚೀತ್ಕತಿಧ್ವನಿ ತದುದ್ಭಟಹೂಂಕೃತಿಯಂತೆ ತಾಡಿತ ||
ಜ್ವಾಲತೆಯೊಂದುತಾಕೃತಿ ವಿಜೃಂಭಿಸೆ ಮೃತ್ಯುಬಹುತ್ವಮಾಂತವೋ |
ಲ್ಸಾಲಿರಿದೊತ್ತಿದಸ್ಸರ್ಮರಪೂರ್ಣಮನೋರಥರಾಮಹಾರಥರ್ || ೬೬

ವಚನ|| ಅಂತು ನಿಜರಥಂಗಳನೊತ್ತುತ್ತಿದಿಚ್ಚೆನಿಂದು—

ವೃ|| ಜೋಡಿಸಿದಶ್ವಕಂದರಮನೊಂದೆಶರಾಗ್ರದೆ ಖಂಡಿಪಂತೆ ರ |
ಳ್ಮಾಡುವ ನೀಳ್ದಕೇತುಮಣಿದಂಡಮನೊಡ್ಡಿದಸೂತವಕ್ಷಮಂ ||
ತೋಡುವ ಮೇಘಡಂಬರಮನಿಕ್ಕಡಿಮಾಳ್ಪವೊದಳ್ದ ಲೋಹದೊ |
ಳ್ಜೋಡನಡುತ್ತುರ್ತುಂಡಿಪವರೂಥಿಗಳೊಟ್ಟಜೆಯಿಂ ಪಳಂಚಿದರ್ || ೬೭

ಕಂ|| ಗರಿಗಣೆಗಳ್ನೆರೆ ಯುರ್ಚ್ಚಿದ |
ತೆರವೊಳ್ಪರಪಾಯ್ದು ರಕ್ತರಸಖಂಡಂಗಳ್ ||
ತುರುಗಿರೆ ವರೂಥಿಗಳ್ನೆರೆ |
ಮುರೆದಕ್ಕರ್ಸುಮಿತಜಪಾ ಕ್ಷಿತೀಜಂಗಳವೋಲ್ || ೬೮
ಕಣೆಪಣೆಯೊಳ್ನಡೆ ಕೀಳ್ತ |
ಕಣೆಯಿಂದೆಚ್ಚವನ ಪಣೆಯನೊಡನಿಸೆ ಕೀಳ್ತ ||
ಕಣೆಯಂ ಮೊದಲಂತೆವೊಲಾ |
ಪಣೆಯೊಳ್ನಾಂಟಿಸಿದ ನವನದೇಂ ಬಿನ್ನಣಿಯೋ || ೬೯

ವಚನ|| ಇಂತದಿರದಿದಿರ್ಚ್ಚಿ ಪೊಣರ್ಚ್ಚುವ ವರೂಥಿಗಳ ತಂಡದ ಗಂಡುಗೊಂಡ ಬಂಡಣಮಂ ಕಂಡು ಪಿಂಡುಗೊಂಡು ಮುಂಡಳಿಸಿ ದಂಡಿಗಾಂತ ಚಂಡ ಗಜಾರೋಹಕರುದ್ದಂಡವೇತಂಡಂಗಳನಳಂಕೆವೆತ್ತಂಕುಶಮನಿಕ್ಕಿ ಜಂಕಿಸಿ ಭೋಂಕನಣೆದಾದ್ರ್ದು ಸಾದ್ರ್ದಂಕಿ ಕೂಂಕಿ ನೂಂಕಿದಾಗಳ್—

ವೃ|| ನಭದೊಳ್ಮೆಳ್ಪಿರಿದಾಡೆ ಸಿಂಗರದ ಸಿಂದಂ ಡಿಂಡಿಮುಧ್ವಾನ ಮು |
ಣ್ಮೆ ಭಟಾನೀಕದ ಬೊಬ್ಬೆ ಪರ್ಬ್ಬಿರೆ ಲಂತದ್ಘಂಟಾರವಂ ಪೊಣ್ಮೆ ಮೇ ||
ಣಿಭಯೂಥಂ ಪರಿದತ್ತು ನಿಶ್ಚಳಿತಕರ್ಣಂ ಕ್ಷಿಪ್ತಹಸ್ತಂ ರದ |
ಪ್ರಭೆ ಚೆಲ್ವಾಗೆ ಮದಾಂಬು ಸೂಸೆ ಸಮರಕ್ರೀಡಾ ಮಹೋತ್ಸಾಹದಿಂ || ೭೦

ಕಂ|| ನೆಗಪಿ ಭರಿಕಯ್ಯ ನಬ್ಬಾಂ |
ಬುಗಳಂ ಬರೆಪೀರ್ದ್ದು ಕರ್ಣಚಾಳನದಿ ನವಂ ||
ಮಿಗೆ ಪರಿಯಿಪ ಮದಕರಿಗ |
ಳ್ಪಗೆಗೊಂಡೊಡನೊಡ್ಡಿ ನಿಂದು ವೆರಡುಂ ಬಲದೊಳ್ || ೭೧

ವಚನ|| ಅಂತೊಡ್ಡಿ ನಿಂದು—

ವೃ||ಭರಿಕೈಯ್ಯಿಂ ಭರಿಕಯ್ಯನಾಂತು ಮುರಿದೊತ್ತುತ್ತೆತ್ತಿ ಪತ್ತುತ್ತೆ ದೀ |
ರ್ಘ ರದಾಗ್ರಂಗಳಿನೊಂದ ನೊಂದಿರಿದು ಜೋದರ್ಬ್ಬಿಬ್ಬಿಡಲ್ಮೇಲೆ ರ ||
ಕ್ತರಸಂ ವಕ್ತ್ರದಿ ನೆಚ್ಚು ಪಾಯೆ ಮೊಳಕಾಲೊಳ್ದಂಡೆ ಗೊಂಡೊಡ್ಡಿನಿಂ |
ದೆರಡುಂ ಪೆರ್ಬ್ಬಲದಗ್ಗದಾನೆಗಳ ಮೊತ್ತಂ ತಾಗಿತಂತಾಜಿಯೊಳ್ || ೭೨

ವಚನ|| ಮತ್ತಮಲ್ಲಿ—

ಕಂ|| ಪ್ರತಿರದನಿ ರದನ ಹತಿವಿಗ |
ಳಿತವಿತತಕ್ಷತಜ ಜಳಮನುಗುತರ್ಪ್ಪ ಮದೋ ||
ದ್ಧತ ಹಸ್ತಿರುಧಿರ ಸೃಷ್ಟಿಯ |
ನತಿ ಶಯಮೆನೆ ಕರೆವ ಜಳದಮೆನೆ ಕಣ್ಗೊಳಿಕುಂ || ೭೩

ವೃ|| ಮುಂಬಿಡದೊಕ್ಕು ಕಾಳ್ಪುರ ಮದಾದಮದೋದಕ ದೊಂದು ಗೂಡಿ ರ |
ಕ್ತಾಂಬು ರದಪ್ರಘಾತ ಲಪನೋದ್ಗಲಿತಂ ಪರಿಗೊಂಡು ಪಾಯ್ದು ತ ||
ಳ್ತಂಬುಜಮಿತ್ರ ಜಾಂಬುಪರಿಮಿಶ್ರಿತ ಶೋಣನದೀ ಪ್ರವಾಹ ಮೆಂ |
ದೆಂಬ ಬೆಡಂಗನಂಬರ ಚರಾಕ್ಷಿಗೆ ಬೀರಿದುದಾ ರಣೋರ್ವಿಯೊಳ್ || ೭೪

ವಚನ|| ಮತ್ತಮಲ್ಲಿ ರಣದೇವತೆಯು ನುದ್ದೇಶಿಸಿ—

ವೃ|| ಸೂನಗಿಗತ್ತಿ ಬೆನ್ನ ನಡುಬಾರೊಳೆ ಕೋದಿರೆ ಬೀರಸಿಂಗರಂ |
ತಾನಮದೊರ್ಪ್ಪೆ ನೇಲ್ದು ಜಡಿದಾತ್ಮಕರಾಸಿಯ ನುರ್ಬ್ಬಿ ಬೊಬ್ಬೆಗೊ ||
ಟ್ಟಾನೆಯ ಕೊಂಬದಾಗೆ ಸಿಡಿವಂಜರ ಮುದ್ಧೃತ ಹಸ್ತ ದಂಡಮಾ |
ಬಾನೊಳೆ ತಳ್ತು ತೋರೆ ಸಿಡಿಯಾಡುವ ಮಾಳ್ಕೆ ಯೊಳೊರ್ವ್ವ ನೊಪ್ಪಿದಂ ||

ವಚನ|| ಅದಲ್ಲದೆಯುಂ—

ವೃ|| ಇದಿರೊಳದಿರ್ಚ್ಚಿ ನಿಂದಕಲಿಯಂ ಕರಿ ತನ್ನಕರಾಗ್ರದಿಂ ತುಡುಂ |
ಕಿ ದುದಿರದಿಟ್ಟು ದಾಗಸಕೆ ಮೇಣ್ಬರೆ ಕೊಂಬ ನಮರ್ಚ್ಚಿ ಸಾರ್ಚ್ಚಿದ ||
ತ್ತದಿರದವಂ ಕರಾಸಿಯೊಳೆ ತತ್ಕರಮುಂ ಕಡಿದಲ್ಲಿ ಬೀಳ್ದನಾ |
ಪದದೊಳೆ ತತ್ಕರೀಂದ್ರ ಶಿರದೊಳ್ಸುರನಾರಿಯ ರೊಯ್ದರಾತನಂ || ೭೬

ಭೂರಿರಥಾಂಗ ಚೀತ್ಕೃತಿ ಧನುರ್ಗುಣಠಂಕೃತಿ ಮತ್ತವಾರ |
ಸ್ಫಾರಕರಾಗ್ರಘಾತ್ಕೃತಿ ಭಟಸ್ಫುಟಹೂಂಕೃತಿ ವಾಜಿವಾಂಹಕೋ ||
ದಾರ ಕರಾಸಿ ಘಟ್ಟನ ಠಣತ್ಕೃತಿ ತಾಡಿತ ಖೇಟರಿಕೌಘ ವಿ |
ಸ್ತಾರ ಚಳಚ್ಚಟತ್ಕೃತಿ ಚಮತ್ಕೃತಿ ಯಾದುದು ಯುದ್ಧರಂಗದೊಳ್ ||೭೭

ಕರತಳ ಖಡ್ಗಘಟ್ಟನ ಸಮುದ್ಭವ ವಿಸ್ಫುರಿತ ಸ್ಫುಲಿಂಗಮುಂ |
ಬರತಳ ಮುಚ್ಚಳ ದ್ರುಧಿರ ಶಂಬರ ಸಂಭೃತ ಮುರ್ವಿ ರಂಗದ ||
ಶ್ವರಥಭಟೇಭ ಭೂರಿರವ ಸಂಗತಮೆಣ್ದೆಸೆಯಾಗೆ ಲೋಕಭೀ |
ಕರ ಮೆನಿಸಿತ್ತು ಭೂತಗಣ ಚಿತ್ತ ಮಹೋತ್ಸವ ಕಾರಣಂ ರಣಂ || ೭೮

ಇಡಿಕಿರಿದಿರ್ದ್ದ ದೆಲ್ಲೆಡೆಯೊಳಟ್ಟೆಗಳೊಟ್ಟಜೆ ಮೂಳೆಯೋಳಿ ಪೇ |
ರಡುಗುಗಳೇರಿ ಕಾಳಿಜದ ಪಾಳಿ ತೊವಲ್ಗಳಸಾಲ್ಗಳಂಗದಂ ||
ಗಡಿ ಪೊಸಕಂಡದಿಂಡೆ ನೆಣದುಲ್ಬಣ ಮಾಂತ್ರದ ಮಂತೆಣಂ ಸಿಡಿ |
ಲ್ದಿಡಿದುರು ರುಂಡಮುಂಡಳಿ ಪೆಣಂಗಳ ಜಂಗುಳಿ ನೆತ್ತರೆಳ್ತರಂ || ೭೯

ಕಂ|| ರಿಪುವಿಜಯ ವಿಜಯ ನಿಭ ಭಟ |
ಚಪಲ ಶರೋತ್ಕರ್ಷ ವರ್ಷದಿಂ ತೀವಿ ಜನಾ ||
ಸ್ಯಪರಂ ಪರೆಯಿಂ ಪಡೆದಂ |
ವಿಪುಳ ಸರಿತ್ಪತಿ ಪೊದಳ್ದ ಶರನಿಧಿವೆಸರಂ || ೮೦

ವಚನ|| ಇಂತಾ ಗಜೊಡನಾಗಳಿ ದಿರ್ಚಿ ಪೋಗದೆ ಸಮ ಸಮಸರಂಗೆಯ್ವರಾತಿಬಲಮಂ ಕಂಡು ಕಾಯ್ಪುಗೊಂಡು ರಾಜಶೇಖರ ರಾಜೇಂದ್ರಂ ಮಿತವಚನಂ ಬೆರಸು ನಿಜಗಜೇಂದ್ರಮ ನಣೆದಲೆದು ನೂಂಕಿದಾಗಳ್—

ವೃ|| ಘನಶುಂಡಾದಂಡ ಪಾತಚ್ಯುತ ಖರಕರ ಬಿಂಬಂಬೊಲಿಂಬಾಗೆ ಶುಂಭ|
ತ್ಕನದುದ್ಯದ್ದರ್ಪಣಂ ಫಾಲದೊಳೆ ಸೃಣಿ ಚಲತ್ಕುಂಭ ಕೂಟಾಗ್ರಸಂಘ ||
ಟ್ಟನದಿಂ ಬಿಳ್ದರ್ಧಚಂದ್ರಂಬೊಲಿರೆ ಪೃಥುಶಿರೋಮಧ್ಯ ದೊಳ್ಮುಕ್ತದಾನಾಂ|
ಬು ನಿಯುಕ್ತಂ ಕರ್ಣಮಬ್ಧಂತೊಡರ್ದವೊಲಿರೆ ಕಣ್ಗೊಪ್ಪಿ ಬಂದತ್ತಿಭೇಂದ್ರಂ||

ವಚನ|| ಆಗಜೇಂದ್ರದಗ್ರದೊಳೊಪ್ಪುಱಕ್ಕೆಗಾಂತು ಬಪ್ಪರಿಪುಬಲ ಬಲಾಹಕ ಪ್ರಬಲ ಜಂಝಾಪ್ರಭಂಜನನಂ ಕಂಡು ಸಿಂಹಳೇಂದ್ರಂ ಸಮರ ಸಮುತ್ಸಾಹ ಮಾನಸಂಮಾನಸಂಯು ತಂ ತನ್ನ ಪನ್ನತಿಕೆವೆತ್ತ ಪಾರ್ಥಿವ ಕುಮಾರರೊಂದುಗೂಡಿ ಗಂಧಸಿಂಧುರ ಸ್ಕಂಧಾರೂಢನಾಗಿ ಕಡುವಹಿಲದಿ ನಿದಿರ್ಚಿ ಬಪ್ಪಾಗಳ್—

ಕಂ|| ಬಡಬನಳುರ್ಕೆಯೊ ಭೈರವ |
ನಡರ್ಪೊ ಮಿಳ್ತುವಿನ ದರ್ಪಮೋ ಮಿಳಯದ ಮುಂ ||
ಗಡೆಯ ಸಿಡಿಲೇಳ್ಗೆಯೋ ಮಾ |
ರ್ಪಡೆಯೋ ಬಂದೆನೆ ಕರುತ್ತು ತಾಗಿತ್ತಾಗಳ್ || ೮೨

ವೃ|| ಪೊಡೆದುದು ಪೊಯ್ದುದಟ್ಟಿದುದುಮೆಟ್ಟಿದುದಿಟ್ಟುದು ಪೊಟ್ಟೆಯಿಂಕರು|
ಳ್ಗಡಣಿಸಿ ಪಾಯ್ವಿನಂ ತುಳಿದುದೆತ್ತಿದು ದೊತ್ತಿದು ದತ್ತಮಿತ್ತಲುಂ ||
ಕೆಡಪಿ ದುದೀಳ್ದು ಸೀಳ್ದುದುರೆ ತೊಳ್ದುದು ಪೋಳ್ದುದು ನೀಳ್ದಹಸ್ತದಿಂ |
ಪಡಿಬಲಮಂ ಮಹಾರಣ ವಿದಾರಣ ದಾರುಣ ಮತ್ತವಾರಣಂ || ೮೩

ಕಂ|| ಗಿರಿಯ ಸಿರದಿರಿದು ಕೆಡಪಿದೊ |
ಡಿರದದರಗ್ರದ ಮರಂಗಳುರುಳ್ವಂತಿರೆ ತ ||
ತ್ಕರಿ ಕರಿಯನಿರಿದು ಕೆಡಪಿದೊ |
ಡುರುಳ್ದ ಜೊಲ್ದರ್ದತ್ತರ್ದಗ್ರದಿಂ ರಣಧರೆಯೊಳ್ || ೮೪

ಕಡುಪಿಂ ಕರಿ ನಿಜಕರದಿಂ |
ಪಿಡಿಪಿಡಿದಿಟ್ಟುದು ಪೊಣರ್ಚಿದರಿಸುಭಟರ ನಿ ||
ಟ್ಟೆಡೆಗೊಂಡಚ್ಚರಸಿಯರಿ |
ರ್ಪೆಡೆ ಗಿವರೊಳಗಾಯ್ದು ಕೊಳ್ಳಿಮೆಂದೊಪ್ಪಿಪ ಪೋಲ್ ||

ವಚನ|| ಆಗಳ್ಪಚಂಡ ಬಳನೆಂಬ ಸಿಂಹಳನ ಪಡೆವಳಂ ಪಡಿತಳಿಸು ತಿದಿರ್ಚಿ ಮರಲವ ನಾರೋಹಿಸಿರ್ದ—

ಕಂ|| ರಥವಂ ಸುಗ್ರೀವಕ್ಕತ್ತು ತೆ ಸಾ |
ರಥಿಯಾಂತೊಡೆ ಪಿಡಿದಿಭಂ ಸಭಕ್ಕಿಡೆ ದಿನಕೃ ||
ದ್ರಥದೊಳಗೆ ಬೀಳ್ದು ತತ್ಸಾ |
ರಥಿಯೆನಿಸಿದ ನವನನೂರುವರುಣತೆಯಿಂದಂ || ೮೬

ವಚನ|| ಅದಲ್ಲದೆಯುಂ ಮಾಪಡೆವಳನೂರುದಂಡಮಂ ಕದಳೀಕಾಂಡಮಂ ಮುರಿವಂತೆ ಮುರಿದವನ ಭುಜಮಂ ಕರೀರಮಂ ಕೀಳ್ವಂತೆ ಕೀಳ್ತವನ ರುಂಡಮಂ ಪುಂಡರೀಕಮಂ ಪರಿವಂತೆ ಪರಿದು ಕೊಳುಗುಳ ದಿಳೆಯೆಂಬ ಕೊಳದೊಳೊತ್ತಡರ್ದ ನಳಿನನಾಳಂಗಳೆಂಬಂತೆ ನರರ ನರವಾಲೆ ಮುಂಗಾಲೊಳೊತ್ತಡರೆ ಮಾಲೆಸರಪಳಿಯಂತೆ ಬಳ್ಳಿಗರುಳ್ಪಿಂಗಾಲೊಳೆಳಲ್ದುಬರೆ ಭರಂಗೊಂಡೋಜೆಯಿಂ ಬರ್ಪ ರಾಜಶೇಖರ ಕರೀಂದ್ರ ದಿದಿರೋಳ್ಸಿಂಹಳೇಂದ್ರಂ ನಿಜಗಜಮಂ ಪರಿಯಿಸಿನಿಂದು ಚಂಡಕೋದಂಡ ಮನಡಸಿ ಪಿಡಿದು—

ವೃ|| ಪಟುಭುಜನೊತ್ತಿ ಜೇವೊಡೆದು ಸಿಂಜಿನಿಯಂ ಸೆಳೆದಾದ್ರ್ದಸಾರ್ದಸಂ |
ಘಟಿಸಿ ತೊಡಚ್ಚು ತೆಚ್ಚೊಡರಿ ಸಿಂಹಳ ನೈದುವ ಲೋಕಭೀಕರೋ ||
ತ್ಕಟ ರಟನಾಸ್ತ್ರಮಂ ತರಿದನೊಂದೆ ಶರಾಗ್ರದೆ ಮಧ್ಯದೊಳ್ಮಹಾ |
ಭಟರಿರದಾರೆ ನಿರ್ಜರ ರಿದಚ್ಚರಿಯೆಂದೆಸೆ ರಾಜಶೇಖರಂ || ೮೭

ವಚನ|| ಅಂತವಂ ಶರಿದುರುಳ್ದೆ—

ವೃ|| ಕಂಡರೊಳಿಂತುಟಪ್ಪ ಕಡುಸಾಹಸಿ ಕೇಳ್ದರೊಳಿಲ್ಲವೆಂದು ಮುಂ |
ಕೊಂಡ ಕುಳಪ್ರತಾಪನಿಧಿ ಸಿಂಹಳಭೂಪತಿ ಮೆಚ್ಚಿ ಚಂಡಕೋ ||
ದಂಡ ಮನಾರ್ಪಿನಿಂ ಸೆಳೆದು ಬೊಬ್ಬಿರಿದೆಚ್ಚ ನತುಚ್ಛ ಬಾಣಮಂ |
ಖಂಡಿಸಿದಂ ಬಳಿಕ್ಕ ಮದನಂ ತರದೊಳ್ನಿಜ ಬಾಣದಿಂನೃಪಂ || ೮೮

ವಚನ|| ಅಂತು ಖಂಡಿಸುತ ಖಂಡಪ್ರತಾಪಂ ಗಂಡುಗೊಂಡಿದಿರ್ಚಿ ನಿಂದ ಸಿಂಹಳೇಂದ್ರನ ಧಟಂ ಕಂಡು—

ವೃ|| ಪಟುಕೋಪಾಟೋಪಬದ್ಧಭ್ರುಕುಟಿವಿಚಲಿತಶ್ಮಶ್ರುಘರ್ಮಾಂಬುಬಿಂದು |
ಸ್ಫುಟ ಫಾಲಂ ಪದ್ಮರಾಗಾರುಣ ವಿಕಟಕಟಾಕ್ಷಂ ಧನುರ್ಜ್ಯಾಲತಾ ಸಂ ||
ಘಟಿತಾ ವೋಘಾಸ್ತ್ರದಿಂ ತತ್ಕರಟಿ ಬಿದುವನಾರ್ದ್ದೆಚ್ಚ ನೆಚ್ಚಂತೆ ಮುಂ ಧೂ |
ರ್ಜಟಿಪುತ್ರಂ ಕ್ರೌಂಚಮಂ ಪಂಚಮೆನೆ ರಿಪುಮಹಾಕಲ್ಪ ಕಾಲಾಗ್ನಿರುದ್ರಂ ||

ವಚನ|| ಅಂತೆಚ್ಚ ಶರಂ ಪಿಂಚಕದೊಳ್ನಟ್ಟುಚ್ಚಿ ಪಾಯೆಪಡಲಿಡುವ ಸೈನಿಜ ಗಜದಿನಿಳೆಗೆ ದುಮ್ಮಿಕ್ಕಿ ಹಂಮುಗೆಡದೆ ಧೀರಸಾರಥಿ ಸಾರ್ಚಿದ ರಥಮನೇರಿದಾಗ ಳ್ಧರ್ಮಯುದ್ಧಕ್ಕೆ ಮನವಿತ್ತು ರಾಜಶೇಖರ ನಮರಗಿರಿಯಿ ನಿಳಿದಿಳಾರಥಮನಾ ರೋಹಿಪ ಭವನ ವಿಭವಮಂ ತಳೆದಿಭಮು

ಸ್ತಕದಿ ನಿಳೆಗವತರಿಸಿ ಮಣಿರಥಮನಾರೋಹಿಸಿ ಸಾಕ್ಕೆಗೆ ಪಂನತಿಕೆ ಮಿಗೆ ಪರಿಯಿಪಾಗಳ್ಸಿಂ
ಹಳೇಂದ್ರಂ ಕೆರಳ್ದು ನೋಡಿ—

ಕಂ॥ ಬಳಯುತ ರೇಳ್ಗೊಗರ್ಗ್ಗವುದ |
ದಳವಿಯೊಳೋಲೈಪರರಸ ರವಿಳಕ್ಕೆಪ್ಪಂ ||
ಗಳ ನೀವರೆಂಬ ನಿನ್ನ |
ಗ್ಗಳಿಕೆಯದೇಂ ಸಿಂಹಳೇಂದ್ರ ನೊಳ್ಕೊಂಡಪುದೇ || ೯೦

ವೃ|| ಗುಹೆಯೊಳಗಿರ್ದ್ದ ಕೇಸರಿಯು ನಾಸುರದಿಂ ವನದಂತಿ ಸೊಕ್ಕಿ ಬಂ|
ದಹಹ ಕೆರಳ್ಚಿ ಜೀವಿಕುಮೆ ನೀನದರಂತಿರೆ ವಾರ್ಧಿ ಮಧ್ಯಮ ||
ದ್ಗ್ರುಹದೊಳೆ ಸಂತವೊಪ್ಪುವನ ನೆನ್ನನಿಳೇಶ್ವರ ನೀಂ ಕೆರಳ್ಚಿ ಮೇ |
ಣ್ಪ್ರಹತಿಯ ನಾನದೆಯ್ದು ವೆಯದೆಂತೆಲೆ ತೀರ್ಚ್ಚದೆ ನಿನ್ನನಿರ್ಪ್ಪನೇ || ೯೧

ವಚನ|| ಎನೆ ಸಮರ ಷಣ್ಮುಖಂ ಸರೋಷ ಹಸನ ಮುಖನಾಗಿ ಮಗುಳ್ದಿಂತೆಂದಂ—

ಕಂ|| ಜಳನಿಧಿಯನುಳಿದು ನೀಂ ಕೊಳು |
ಗುಳಕೈದಿದೆ ಕೈದುಗೊಂಡು ಮದವಿಹ್ವಳ ಸಿಂ ||
ಹಳ ಭಾಪು ತೋರ್ಪ್ಪನೆಲೆ ಕೈ |
ಚಳಕಮ ನೊರ್ಬನಿತು ಸೈರಿಸೈ ರಣದೆಡೆಯೊಳ್ || ೯೨

ಸಿಂಹಳಭೂಪತಿ ನಿಜದೆ ನೃ |
ಸಿಂಹಂ ನೀನಲ್ತೆ ನಿನ್ನನಾಹವದೆಡೆಯೊಳ್ ||
ಸಂಹರಿಸಿ ಶರಭವಿಕ್ರಮ |
ಮಂ ಹರಸುತನಾದುದಕ್ಕೆ ತೋರ್ದ್ದ ಪೆನೀಗಳ್ || ೯೩

ವಚನ|| ಎಂದು ಮುಟ್ಟ ಮೂದಲಿಸಿ—

ಕಂ|| ಪೃಥುಳ ಭುಜಬಳವಿಜಿತದಶ |
ರಥ ಸುತನಪ್ರತಿ ಮಗುಣಗಣಾಂಕಂ ಗುಣಮಂ ||
ಪ್ರಥಿತ ಶರಾಸನ ಕೇರಿಸಿ | ೯೪
ಪೃಥಿವೀಶ್ವರ ಪುತ್ರನೊತ್ತಿ ಜೇವೊಡೆಯಲೊಡಂ ||

ವೃ|| ಅದರುದ್ಯದ್ಧ್ವನಿ ಪೊಯ್ಯೆ ಮೇಗಣುಡುಜಾಳಂ ಕಳ್ಕನೊಕ್ಕಂತದೊ|
ಕ್ಕದು ಚಂಚತ್ಸುಮನಃಪ್ರಮುಕ್ತ ಸುಮನೋವರ್ಷಂ ಪ್ರತಿಧ್ವಾನ ಮು ||
ಣ್ಮಿದುದೆಂಬಂತಿರೆ ಪೊಣ್ಮಿದತ್ತ ಮರಭೇರೀ ದಾಂಥಳ ಧ್ವಾನಮ |
ಭ್ರದೊಳಾ ಬಲ್ಲನುಗೊಲ್ದು ಪೂಡಿದ ನಮೋಘ ತ್ರಾಣಮಂ ಬಾಣಮಂ|| ೯೫

ವಚನ|| ಅಂತು ಪೂಡಿ ನೀಡಡಿಗೊಂಡು ತೆಗೆನೆರೆದು ನಿಂದಾಗಳ್—

ವೃ|| ಕರ್ಣಸಹಾಯಮಂ ಪಡೆಯುದಂದಿರದೈದಿದ ಸರ್ಪಬಾಣಮಾ |
ಪೂರ್ಣಮನೋರಥಂ ಬಡೆದುದಿಲ್ಲೆಸುತಂ ಬಿದು ರತ್ನಮಂಡನಾ ||
ಕೀರ್ಣ ರುಚಿಪ್ರಬದ್ಧ ಕವಚಾನ್ವಿತ ಕರ್ಣಸಹಾಯಮಂ ಗುಣೋ |
ದೀರ್ಣತೆ ಯಿಂದೆ ಪೊಂದಿತೆನೆ ತನ್ನಿಕಟಸ್ಥಿತಮೇಂ ಮನೋಜ್ಞಮೋ || ೯೬

ವ|| ಅಂತಾಬಾಣಮಂ ರಿಪುಮುಖ ವಿದಾರಣ ವೀರಭದ್ರಂರೌದ್ರಂ ಮಿಗೆಮಾಣದೆಚ್ಚಾಗಳ್—

ಕಂ|| ಕಡಿದುದವನೆಚ್ಚ ಕಣೆಗಳ |
ನೆಡೆಯೊಳ್ಪಡಿತಳಿಸಿ ಪೊಕ್ಕು ತತನ್ನೃತನ ಪೇ ||
ರೊಡಲ ನೊಡೆದುಚ್ಚಿ ಪಾಯ್ದುದು |
ಬಿಡೆ ನೆತ್ತರ ಸರೆ ತದಂಗದಿಂ ತಕ್ಷಣದೊಳ್ || ೯೭

ವಚನ|| ಅದಂ ಕಂಡು ಕೌತುಕಂಬಟ್ಟು ಬೆರಲೆತ್ತಿ ಪೊಗೆಳ್ದಾಶುಗಾ ಶನ ನಿಭಾ ಶುಗೆ ಮನಾಶುಗಾಸನದೊ ಳೋಸರಿಸದೆ ತೊಡಚ್ಚಿ ಸಾಚ್ಚಿತೆಗೆನೆರೆದು ನಿಂದು—

ಕಂ|| ಮಣಿಗೆಳಸಿ ಕೆಮ್ಮನೆಮ್ಮೊ |
ಳ್ಮಣಿಯದಿದಿಚ್ಚಿದೆ ನರೇಂದ್ರಸುತ ನಿನಗೀ ಕೂ ||
ರ್ಗ್ಗಣೆಯಿತ್ತಪುದು ನವವ್ರಣ |
ಮಣಿಯಂ ಕೊಳ್ಳೆಂದು ಸಿಂಹಳಂ ಪದೆದೆಚ್ಚಂ || ೯೮

ನಡುಗೆ ಸುರರೊಡನೆ ಕಿಡಿಗಳ |
ಗಡಣ ಮನುಗುತಪ್ಪ ಭೀಕರಾಸ್ತ್ರಮ ನದನಿ ||
ರ್ಕಡಿಗೈವ ಮೋಘ ಶರಮಂ |
ತಡುತೆಚ್ಚಂ ರಾಜಶೇಖರಂ ಸಿಂಹಳನಂ || ೯೯

ಎಚ್ಚೊಡಿಳೆ ನಡುಗೆ ಸಡೆಯೆ ವಿ |
ಯಚ್ಚರರಂಬದು ಪೊದಳ್ದು ಕೆನ್ನೀರ ಪೊನಲ್ ||
ಬೆಚ್ಚನೆ ಪಾಯ್ತರೆ ವಕ್ಷಮ |
ನುಚ್ಚಳಿಸಿದೊಡಹಿತನೃಪತಿ ಮೂರ್ಛಿತೆನಾದಂ || ೧೦೦

ವಚನ|| ಆಗಳದಂ ಕಂಡು ಕನಲ್ಕೆಗೊಂಡು ಮಂಡಲಿಸುತಿಂದ್ರ ಮನ್ಯುಭದ್ರಕೇತು ಹಿರಣ್ಯಕವಚಂ ಚಂಡಬಾಹು ಪ್ರಚಂಡವರ್ಮಂ ಸಿಂಹಳಸೇನಂ ಕುಲಿಶದಂತಂ ಲೋಹಿತಾಕ್ಷಂ ಪಿಂಗೇಕ್ಷಣಂ ಕಾಲನೇಮಿ ಭೀಮನಾದನಾದಿತ್ಯ ವರ್ಮಂ ವಿಕ್ರಮ ಬಾಹು ಮೊದಲಾದ ಪಾರ್ಥಿವನ್ನಿಜವರೂಥಂಗಳನೇರಿ ವಿಪುಳ ಪ್ರಚಂಡ ಧನುರ್ದಂಡಮಂ ತಿರುಪೊಯ್ದು ಜೀವೊಡೆದು ಘುಡುಘುಡಿಸಿ ಸಿಡಿಲ ಪಡೆವಂತೆ ಮೋಹರಿಸಿ ಶರವರ್ಷಮಂ ಕರೆಯುತ್ತೆ ನಿಜಬಲಂಬೆರಸು ಕಡಂಗಿ ಕವಿಯಲೊಡನೆ—

ವೃ॥ ಕಡುಪಿಂಕಾಯ್ಪೇರಿಸಿಂಗಾಡಿಯನೆಸೆಳೆದುಮೆಯ್ಯುರ್ವಿಕಯ್ಯಿಕ್ಕಿತೋಡ
ತೊಡನಂಬಿಂ ಬೆನ್ನವೊಂಬತ್ತಳಿಕೆಯೊಳದಟಿಂ ಪೂಡಿ ಪೂಣ್ದೆಚ್ಚು ಕಾಲಾ |
ಳ್ಕಿಡೆವನ್ನಂ ಪಾಯ್ವ ಚಂಚದ್ರಥ ಚಯಮುಡಿವನ್ನಂ ಗಜಾಶ್ವಪ್ರತಾನಂ |
ಮಡಿವನ್ನಂ ಮಾಣದೆಚ್ಚಂ ಮದವದರಿ ಮಹೀಭೃನ್ಮಹೀಭೃನ್ಮಹೇಂದ್ರಂ॥೧೦೧

ವ॥ ಆಗಳ್ಮಿತವಚನನುಚಿತ ಹಯಾರೂಢನಾಗಿ ಕರತಳದೊಳ್ಕಾಲಜಿಹ್ವೆಯಂ ಪೋಲ್ವ ಕರವಾಳಮಂ ಜಡಿದು ಝಳಂಪಿಸಿ ಜಳದಪಟಲದೊಳ್ಪೊಕ್ಕ ಜಂಝಾಪವನನಂತೆ ಮಿಕ್ಕು ಪೊಕ್ಕು—

ವೃ॥ ಪಡಲಿಡೆ ತೇರ್ಗಳಂ ಪೊಡೆದು ಸಾರಥಿಯಂ ತಿವಿದಶ್ವಕಂಧರಂ |
ಕಡಿಯೆರಡಪ್ಪಿನಂತರಿದು ಖಂಡಿಸಿ ತದ್ಧ್ವಜಮಂ ಪೊರಳ್ಚಿ ಮುಂ ||
ಗಡೆಯ ಭಟರ್ಕಳಂ ರಥದ ಚಕ್ರಮನಿರ್ಕಡಿಗೈದು ಸಾಹಸಂ |
ಬಡೆದಿದಿರಾಂತ ತದ್ರಥಿಕರಂ ತಲೆಗೊಂಡ ನಖಂಡ ವಿಕ್ರಮಂ || ೧೦೨

ವಚನ॥ ಮತ್ತಂ—

ವೃ॥ ಕರಿಶಿರಮಂ ವಿದಾರಿಸೆ ಕರಾಗ್ರದ ಖಡ್ಗದ ವಜ್ರಪಾತದಿಂ |
ಗಿರಿ ಬಿರಿವಂತೆ ಮೇಣ್ಬಿರಿದು ದಂತೆದರಂತರದೊಳ್ಪೊದಳ್ದ ಕೇ |
ಸುರಿಯಿರಮೆಂಬಿನಂ ರುಧಿರವಾರಿಯೊಸರ್ತುದು ತದ್ರಸಾರ್ದ್ರಬಂ |
ಧುರತರ ಮೌಕ್ತಿಕಂ ಸಿಡಿವಕೆಂಗಿಡಿಯಂತಿರೆ ಪಾರಿತಾಜಿಯೊಳ್ || ೧೦೩

ಕರಿಗಳ ಘಟ್ಟು ಪಟ್ಟಪರಿ ವಾಜಿಗಳೋಜೆಯ ಪೌಜು ಗಾಜುಗೋ |
ಜಿರದಿದಿರಾಗಿ ಮೊಗ್ಗರಿಸಿದಗ್ಗದ ತೇರ್ಗಳ ನುಗ್ಗುನುಗ್ಗುಬಿ ||
ತ್ತರದೊಳೆ ಪಿಂಡುಗೊಂಡ ಭಟಮಂಡಳಿ ತಂಡದೆ ತುಂಡುತುಂಡದಾ |
ಗಿರೆ ಕಡಿದೊಕ್ಕಲಿಕ್ಕಿದನುದಗ್ರ ಸಮಗ್ರ ಮಹೋಗ್ರ ವಿಗ್ರಹಂ || ೧೦೪

ವ॥ ಅದಲ್ಲದೆಯುಮಲ್ಲಿ —

ವೃ॥ ಇರಿದರಿದಿರ್ಚಿದ ಪೂರ್ಡೆದರಿಟ್ಟ ರುರುಳ್ಚಿದ ರೊತ್ತಿ ತತ್ತರಂ |
ದರಿ ದರಡುತ್ತುಸೀಳ್ದರರೆಯಟ್ಟಿದ ರೊಟ್ಟಿದ ರಟ್ಟೆಯಂ ಕೊರ ||
ಲ್ಗೊರೆದರ ದಿರ್ಚಿದ ಸ್ರ್ದೆದಿದ ರಣ್ಮಿದ ರಿಕ್ಕಿದ ರೆಚ್ಚರಾರ್ದುಬೊ |
ಬ್ಬಿರಿದ ರಡಂಗೆ ಪೂಯ್ದ ರರಿಸೈನ್ಯಮ ನಾಹವದೊಳ್ಮಹಾಭಟರ್ || ೧೦೫

ವಚನ॥ ಆಗಳ್ಪ್ರಳಯಮೇಘ ಜ್ಯೋತಿಯೊಳಿದಿರ್ಚಿ ದಂಜನಾದ್ರಿಗಳಂತೆ ಕುಂಭಿಗಳ್ಕುಂಭಿನಿಯೊಳ್ಕುಂಬಿಟ್ಟು ಕೆಡೆಯೆಯುಂ ಶರಭನೊಳಾಂತ ಸಿಂಗಂಗಳಂತೆ ತುರಂಗಂಗಳ್ಪಿಂಗದೆ ಮುಂಗಡೆಯುಯೊಳುರುಳೆಯುಂ ಜಂಝಾಪವನನೋಳೊಡ್ಡಿನಿಂದ ನೀರದೇರ್ಗಳಂತೆ ತೇರ್ಗಳ್ನುಗ್ಗುನುರಿಗೊಂಡು ಪಡಲಿಡೆಯುಂ ದವಶಿಖಿಯೊಳ್ಪೊಱಕ್ಕೆಗೊಂಡಪಾದಪಂಗಳಂತೆ ಪದಾತಿಗಳ್ಪನ್ನತಿಕೆ ಗೆಟ್ಟು ಮಡಿಯೆಯುಂ ಮಿತವಚನಂ ತನಗಿದಿರಾಂತರಿಬಲಮನಿಂತು ತವಿಸಿದಾಗಳ್—

ವೃ|| ತುಂಗಮತಂಗಜ ಪ್ರಕರ ಮಸ್ತಕಮೌಕ್ತಿಕರಾಶಿ ರಾಜಲೋ |
ಕಂಗಳ ಮೌಳಿಮಂಡಿತ ಮಣಿಪ್ರಕರಂ ನೃಪಚಾಪ ಮುಕ್ತ ಬಾ ||
ಣಂಗಳ ಪಾತದಿಂ ಸುರಿದಸೃಙ್ನದಿಯೊಳ್ಬೆರೆದೈದಿ ಕೂಡೆರ |
ತ್ನಂಗಳವಂಗೆ ಮೇಣ್ದೊರೆದುವಲ್ಲದೊಡಬ್ಧಿ ಗವೆಂತು ಸಾರ್ದುರ್ವೋ || ೧೦೬

ಕಂ|| ಪಡಲಿಟ್ಟಪಡೆಯ ನೆತ್ತರ |
ಮಡುವಿ ನೊಳುಡಿದುಡಿದು ಕೆಡದಕರಿದಂತಂಗಳ್ ||
ಕಡಿವಡೆದ ಸುಭಟ ಶಿರಮುಂ |
ಪಡೆದುವು ತದ್ಬಿಸಬಿಸಪ್ರಸೂನದ ಸಿರಿಯಂ || ೧೦೭

ಘುಳುಘುಳಿಸಿ ಪರಿವ ನೆತ್ತರ |
ಪೂಳೆಯೊಳ್ನೆರೆ ಮುಳುಗಿ ಪಂದೊವಲ ಧೋತ್ರಮನು ||
ಟ್ಟೆಳನರದ ಜನ್ನಿವಾರಮ |
ನಳವಡಿಸುತ್ತಲ್ಲಿ ಬೊಮ್ಮರಕ್ಕಸರೆಸೆದರ್ || ೧೦೮

ತಳಿರುಡೆಯೆನೆ ಪಂದೊವಲು |
ಟ್ಟೆಳಲತೆಯೆನೆ ನರವನೆತ್ತಿ ಸುತು ತೆ ಗುಂಜಾ ||
ಫಳಮೆನೆ ಕಳೆದಿಭಮುಕ್ತಾ |
ವಳಿಯಂ ಮರುಳಮುಮ ಶಬರಿಯೆನಿಸಿತ್ತದರೊಳ್ || ೧೦೯

ವಚನ|| ಆಗಳ್—

ಕಂ|| ತಿಳಿಯೆ ನಿಜಮೂರ್ಛೆ ಮುರಿದಾ |
ಗೆಳೆ ಪರಿತಪರ್ಾತ್ಮಬಲಮ ನೀಕ್ಷಿಸಿ ಭಯವಿ ||
ಹ್ವಳ ಸಿಂಹಳನಾ ಕೊಳುಗುಳ |
ದಿಳೆಯಂ ಬೆಂಗೊಟ್ಟು ಜಗುಳ್ದ ನತಿಜವದಿಂದಂ || ೧೧೦

ವಚನ|| ಅಂತು ಜಗುಳ್ದು ಜಳಧಿಮಧ್ಯ ದೊಳ್ಸಬಳ ದುರ್ಬಳ ನಸ್ತಮಯ ಸೂರ್ಯನಂ ತೆ ತೇಜಂ ಗುಂದಿ ಪೊಕ್ಕು ಪೋಪಾಗಳ ರಿಪುಜಯ ವಿಕ್ರಮಾರ್ಕನಮೋಘ ಬಾಣಮಂ ಕೇಣದಿಂ ಪ್ರಾಣಂಗೊಳಲೆಂದು ಮಾಣದೆ ಬಾಣಾಸನ ದೊಳ್ತೊಡ ಚ್ಚುರ್ವಾಗಳ್—

ವೃ|| ಶಕ್ರಮುಖಾಮರರ್ಕ್ಳೆಲೆನಿನ್ನದಟಿಂಗಗಿದೊಂದು ಗೊಂಟಿನೊ |
ಳ್ಚಕ್ರಮ ಮಿಪ್ಪರ್ ರಿನ್ನು ಮೆನೆ ಸಿಂಹಳನಾಂಪನೆ ಗಾಂಪು ದೋರಿಭೂ ||
ಚಕ್ರಕೆ ಪೊಕ್ಕನಕ್ಕಿಕಡಲಂ ತೊಡಬಿತ್ತರ್ ವಿಸಂಬನಿಂದು ನಿ |
ರ್ವಕ್ರ ಪರಾಕ್ರಮಾಕ್ರಮಿತ ವಿಕ್ರಮ ವಿಕ್ರಮ ರಾಜಶೇಖರಾ || ೧೧೧

ವಚನ|| ಎಂಬಮಿತವಚನನ ಹಿತವಚನ ಮನಾಕರ್ಣಿಸಿ ಸುಪರ್ಣ ಪರಾಕ್ರಮನಾ ಕರ್ಣಾರ್ಣಂ

ತಮುಗಿದ ಕೂರ್ಗ್ಗಣೆಯನು ಪಸಂಹರಿಸಿದಾಗಳಾ ಸಿಂಹಳಂ ಪಡಂಗೇರಿ ಕಡಲೊಳ್ಬಿಂಗೊಟ್ಟು ಪೋಗಲೊಡನೆ—

ವೃ|| ಅತುಳಿತ ತತ್ಪ್ರತಾಪ ಬಡಬಂಗಗಿದಂತಿರೆ ಸಿಂಹಳೇಂದ್ರನ |
ಪ್ರತಿಮ ಮದಾಬ್ಧಿ ವ್ಯೆದೆಗೆದವೋಲ್ಮ್ಮಳಿಸಿಂದವೆ ರಾಜಶೇಖರ ||
ಕ್ಷಿತಿಪತಿ ಶೈವಮಂತ್ರನಿಧಿ ಸೋಳ್ಪುದು ಮಳ್ಕಿ ಪಯೋಧಿ ಬಟ್ಟೆಗೊ |
ಟ್ಟತಿ ಶಯಮಾಗೆ ನೀರ್ದ್ದೆಗೆದುದಾ ರಿಪುಸೀಮೆಯೆ ಸೀಮೆಯಪ್ಪಿನಂ || ೧೧೨

ಕಂ|| ಪರಿಗತಪದ್ಮ ಮಹಾಪ |
ದ್ಮ ರುಚಿರ ವರಶಂಖ ಮಕರ ಕಚ್ಛಪ ನೀಲ ||
ಸ್ಫುರಿತ ಮುಕುಂದಂ ಕುಂದದ |
ಶರನಿಧಿ ಯಕ್ಷೇಂದ್ರ ನಿಧಿಯಿದೆನೆ ಸೊಗಯಿಸುಗುಂ || ೧೧೩

ಪೊಸಬಿಸಿಲದು ಪೆರದೆಗೆದಿರೆ |
ಕಿಸುಸಂಜೆಯು ಮುಡುಸಮೂಹಮುಂ ಮಿಸುಪವೊಲೇ ||
ನೆಸೆದುದೊ ಪವಳಂ ಮುಕ್ತಾ |
ವಿಸರಂ ಜಾಂಬವ ಜಳಂ ಪೆಡಂಮೆಟ್ಟಲೊಡಂ || ೧೧೪

ಅಘಟಿತವೆದಲ್ತೆ ಮುನ್ನಂ |
ರಘುವಂಶ ಭವಂಗಮೇನಿ ದಿತ್ತುದೆ ಪಥಮಂ ||
ಪೃಥುನ ಪ್ರತಾಪ ಮಹಿಮಾ |
ಲಘು ಶರನಿವನಬ್ಧಿಯಂ ಪೆಡಂಮೆಟ್ಟಿಸಿದಂ || ೧೧೫

ವಚನ|| ಇಂದಂಬರ ದೊಳಂಬರ ಚರಪ್ಪೋಗೆಳುತ್ತುಮಿರೆನಿಜಬಳಂ ಮುದಂಬಡುತ್ತಿರೆ ಪಡಿಬಳಂ ಕಂಗೆಡುತ್ತು ಮಿರೆ ಕಡುವೇಗದಿಂ ಕಮಳಾವತಿಯೆಂಬ ನಿಜದುರ್ಗಮನವಂ ಪೋಗಿ ಪೊಕ್ಕಾಗ ಳ್ಕುಪಿತರಿಪುಪನ್ನಗ ಸುಪರ್ಣಂಬೆನ್ನನೆ ಪೋಗಿ ಪನ್ನತಿಕೆಯಿಂ ತನ್ನ ಬಲಂಬೆರಸು ಸುತ್ತಿ ಪತ್ತಿ ಮುತ್ತಿದಾಗಳ್—

ವೃ|| ಉರಿವರಿವೆಣ್ಣೆ ಪಂದಿದಲೆ ಪೆರ್ದ್ದೊಗಲೆ ಬಲ್ಮೊನೆಗಳ್ಕೃಶಾನು ಮೊ |
ಳ್ಬೆರಸಿದ ಪುಲ್ಲದೊಂದೆ ಪೆಟಲುಪ್ಪಿನ ಪೆರ್ದ್ದಿಗದಿ ಮುರ್ದ್ದಿಗವೆಂಬಿವಂ ||
ಸುರಿದಿಳಿವಾಯ್ಕನೂಂಕಿ ಸೆಳೆದಿಟ್ಟೊಡ ಸಲ್ಲಿಳಿದಿಟ್ಟು ಸೂಸಿ ಪೊ |
ಯ್ದುರಿಭಟರಿಂತು ಕಾದುತಿರೆ ಮುತ್ತಿ ದರಳ್ಕದೆ ತನ್ಮಹಾಭಟರ್ || ೧೧೬

ವಚನ|| ಇಂತು ಮೊತ್ತಂಬೆತ್ತು ಮುತ್ತಿಲಗ್ಗೆಗಗ್ಗರಿಸಿಪ್ಪಾಗಳಾ ಸಿಂಹಳೇಂದ್ರಂ ಘೂರ್ಣಿಸಿ ನಿಜಬಳಂಬೆರಸು ಕಾಳೆಗಕ್ಕೆ ಪೊರಮಡಲುಜ್ಜುಗಿಸಿ ಸಜ್ಜುಗೆಯ್ವುತಿರ್ಪಿನ ಮಾಗೆಳ್ನೀತಿ ಭೂಷಣನೆಂಬ ಮಂತ್ರಿಪಂ ಕೃತಾಂಜಲಿಪುಟನಾಗಿ ವಿನಯದಿಂದಿಂತೆಂದಂ—

ವೃ|| ಅವಧರಿಸಾಣ್ಮ ಸಿಂಹಳನರೇಶ್ವರ ಮದ್ವಚವಮಂ ಮನುಷ್ಯಭೂ |
ಧವ ನಿವನೆಂದು ನೀಂ ಬಗೆಯದಿ ಶಿವಮಂತ್ರಭವಂ ಮಹಾಪ್ರಭಾ ||
ವವಿದಿತ ಶೌರ್ಯನಾತನೊಳೆ ನಿಲ್ವುದು ಗೆಲ್ವುದು ಮಾರ್ಗ್ಗ ಮಾಗದೀ ||
ಭುವನ ದೊಳಂತರಿಂದೆಸಗು ಸಂಧಿಯ ನೀಂ ಬಿಡು ತದ್ವಿರೋಧಮಂ || ೧೧೭

ವಚನ|| ಅದಲ್ಲದೆಯುಂ—

ವೃ|| ಪಿಡಿವರ್ಚಂಡಬವಹ್ನಿಯಂ ಮಿಡಿವರಾದಿತ್ಯೇಂದುಬಿಂಬಂಗಳಂ |
ಕುಡಿವರ್ಸಪ್ತಸಮುದ್ರಮಂ ಪೊಡೆವರಾಶಾದಂತಿಯಂ ಕಿಳ್ತು ಮೇ ||
ಲಿಡುವರ್ಮೇರುವ ನೊತ್ತಿಸುತ್ತಿ ತುಡುವರ್ಶೇಷಾಹಿಯಂ ಪಾಯ್ದು ಪೊ |
ಯ್ದೊಡೆ ವರ್ಪದ್ಮಭವಾಂಡಮಂ ಮೃಡನ ಭಕ್ತರ್ಬರ್ಲ್ಲಿದ ರ್ಭೂವರಾ||೧೧೮

ಕಂ|| ಪಡೆ ಪಡಲಿದೆ ಪಡಗೇರು |
ತ್ತೊಡ ನೈ೯ರೆ ನೀನುಮಾತನುಂ ಬೆಂಕೊಳಲಾ ||
ಕಡಲಕ್ಕೆ ಬಟ್ಟೆಗೊಟ್ಟುದು |
ಗೆಡ ನಡೆನೋಳ್ಪಗಳಾ ತನೇಂ ಜಾವಳನೇ || ೧೧೯

ವಚನ|| ಅಂತುಮಲ್ಲದೆಯುಂ—

ಕಂ|| ಅತಿಸಾಹಸಿ ಸತ್ಯವಚೋ |
ನ್ನಿತ ನಧಿಕದಯಾಳು ಧಾರ್ಮಿಕಂ ಪರಹಿತ ಪಂ ||
ಡಿತ ನುಚಿತಜ್ಞಂ ತಜ್ಞೋ |
ನ್ನತಾವೃತಂ ತನ್ನೃಪಾತ್ಮಜಂ ಸಂಧೇಯಂ || ೧೨೦

ಮಾಯಾವಿ ದೈವವಿಮುಖನ |
ಪಾಯಾಸ್ಪದ ನಾಪ್ತರಹಿತ ನತಿಚಪಲ ನುಷಾ ||
ದೇಯ ಜಡಮತಿ ಯತಿಹತೋ |
ಪಾಯಂ ಸಂಧೇಯನಲ್ತವಂ ರಣಜೇಯಂ || ೧೨೧

ಕ್ಷಿತಿಯೊಳ್ಸಮನೆನಿಪ ಮಹೀ |
ಪತಿಯೊಳ್ಸಲೆ ಸಂಧಿಗೈವುದಾಗದು ತನ್ನಿಂ ||
ದ ತಿಬಳನಜೇಯ ನೆನಿಪು |
ನ್ನತ ನೊಳ್ನುತಮಲ್ತೆ ಸಂಧಿಕಾರ್ಯಂ ನೃಪತೇ || ೧೨೨

ಎಲ್ಲಂದದಿಂದೆ ಕಾರ್ಯದ |
ಗೆಲ್ಲಂಗಾಣಲ್ಕೆ ಬಲ್ಲೊಡಾತನೆ ಬಲ್ಲಂ ||
ಬಲ್ಲಹ ಮೇಣರಿಯದೊಡ ವ |
ನಲ್ಲದೆ ಗಾವಿಲ ನಿಳಾಗ್ರದೊಳ್ಪೆರನೊಳನೇ || ೧೨೩

ವೃ|| ಅತಿಕೋಪಾತುರ ನಾಪ್ತವಾಕ್ಯಬಧಿರಂ ಮಾಯಾವಿ ಸಂಘಾತನಂ
ಗತಿರಕ್ತಂ ರತಿಲಂಪಟಂ ಮದಯುತಂ ಮಾನಾತ್ಯಯಾಭೀತನು ||
ದ್ಧತವೃತ್ತಂ ಗತಧೈರ್ಯರ್ ನಾರ್ಯರ್ವಿಮುಖಂ ನಿದ್ರಾಳು ತಾನಾದ ಭೂ |
ಪತಿಗಾದ್ಯೈಸಿರಿ ಗಾಳಿಗೊಡ್ಡಿದ ಸೊಡರ್ಪ್ಪಿನ್ತೆಳಾಗದೇಂ ಪೋಕುಮೇ ||೧೨೪

ಕಂ|| ಅದರಿಂದೆ ನೀತಿವಿದನ |
ಪ್ಪುದು ನರಪತಿ ವಿಬುಧರೊರೆದವೋಲ್ನಡೆವುದು ತ ||
ಪ್ಪದೆ ಸಿರಿ ಜಸಮಂ ಬೆರೆವುದು |
ಪುದುವಾಳ್ವುದು ಬಾಳ್ವುದಾರ್ಯರ್ಕತಿ ಮಚ್ಚರ್ವಿನಂ||೧೨೫

ಕಲೆಯರಿಯದ ವಿಟನಾತ್ಮನ |
ನೆಲೆಯರಿಯದ ಯೋಗಿ ವೇದಮರಿಯದ ಪಾರ್ವಂ ||
ಬಲವರಿಯದ ದಳಪತಿ ನಯ |
ದೊಲವರಿಯದ ನೃಪತಿ ಬಲ್ಲರಂ ಮಚ್ಚಿಕುಮೇ || ೧೨೬

ಸರಸಗುಣಶಾಲಿ ದೋಷಾ |
ಕರಾಹಿತಂ ಸ್ವಪ್ರಸಿದ್ಧಮ ತಿಬಂಧುರವಂ ||
ಬುರುಹಮದು ಮಿತ್ರರುಚಿ ವಿ |
ಸ್ಫುರಿತಂ ಸಿರಿಗಾದುದಲ್ತೆ ನುನೆ ಮನುಜೇಂದ್ರಾ || ೧೨೭

ಸೋದರಿಯು ಮನೆಗೆ ಪಗೆ ಪಗೆ |
ಗಾದಂ ನೆಲೆ ಸಲೆ ಕಲಂಕಿ ದೋಷಾಕರನಾ ||
ಹ್ಲಾದಿ ಗತಮಿತ್ರತೇಜ ದೊ |
ಳಾದಾರಾಜಂಗಮೇಂ ಕ್ಷಯಂ ಸಮನಿಸದೇ || ೧೨೮

ಎಡರಂ ಪರಿವೊಡೆ ಸಿರಿಯಂ |
ಪಡೆವೊಡೆ ಪಳಿವೊರ್ದದಮಳ ಗುಣಗಣಮಂ ತಾ ||
ಳ್ವೊಡೆ ಜಸಮನಾಂತು ಬಾ |
ಳ್ವೊಡೆ ನುಡಿಯಂ ಕೇಳ್ವುದು ಜನಾಧಿಪಂ ಬುಧಜನರಾ ||

ಕ್ಷಿತಿನಾಥ ನೀತಿವಿದ್ಯಾ |
ಚತುರ್ಮುಖಂ ಗಮಮ ನಿನಗೆ ನೃಪನೀತಿಗುಣೋ ||
ನ್ನತಿಯಂ ಪೇಳ್ವುದು ಕಂತುಗೆ |
ರತಿಕೃತಿ ಚತುರತೆಯ ನೊಸೆದು ಪೇಳ್ವವೊಲಕ್ಕುಂ || ೧೩೦

ಬಿಡದಿದೆ ಗದ್ಗದಂಬಡೆದ ಮಾತಿದೆ ಭೀತಿಯೊ ಕೂರ್ತರೀತಿಯೋ ।
ಮಡದಿಗೆನುತ್ತೆ ಶಂಕಿಪನ ಸಂದೆಗಮಂ ಬಿಡಿಸಿತ್ತು ಮುಂಬದಂ ॥ ೨೩

ವಚನ॥ ಮತ್ತಂ—

ವೃ॥ವದನೇಂದು ಜ್ಯೋತ್ಸ್ನೆಯೆತ್ತಂ ಕವಿದವುದೆನುತುಂ ಪಾಣ್ಬನಾಸ್ಯಾಬ್ಜದೊ
ಚ್ಚಿದಳಕ್ಕುಂಕಣ್ಗದಿರ್ಮ್ಮರಂಜುಗುಮೆನುತದನಾಮಾಲನಂಗೈದಳಕ್ಕುಂ। [ಳ್ಮ।
ಮದಭೃಂಗಂ ಬರ್ಕ್ಕುಮೆಂದಳ್ಕುತೆಪಿರಿದು ನಿಜಶ್ವಾಸಮಂಸೂಸಳಕ್ಕುಂ ॥
ವಿದಿತಂತಾನೆಂಬಿಸಂ ಜಣ್ಮೆಗುತುಪತಿಯೊಳ್ಕೂಡಿದಳ್ಜೋಡೆಯೊರ್ವ್ವಳ್॥ ೨೪

ವಚನ॥ ಮತ್ತೊಂದು ಪಾಳ್ದೀಗುಲದಲ್ಲಿ —

ವೃ॥ ಗಳನಿನದಕ್ಕೆ ಕಾತರಿಪಕಂಠವುನೊಯ್ಯನೆ ಸಂತಪಿಟ್ಟು ಮೈ ।
ಗಳ ಮಸಪಿಂಗೆ ಮೈಮರೆವ ಚಿತ್ತಮನೆಳ್ಚರಿಸುತ್ತೆ ದೈನ್ಯಮಂ ॥
ಗಳಪಲೊಡರ್ಚ್ಚೆಗದ್ಗದಿಪ ಮಾತುಗಳಂ ಮರೆಪಿಕ್ಕಿಪೊಯ್ಯಲೇಂ ।
ದೆಳಸುವಕಯ್ಯನೋಸರಿಸಿ ಕೂಡುವ ಪಾಣ್ಬೆಯ ಜಾಣ್ಮೆ ಸಾಲದೇ ॥ ೨೫

ಕಂ॥ ಆಗಳೆ ಮುಳಿಸಾಗಳೆ ತಿಳಿ।
ವಾಗಳೆ ಪೊಸಬ್ಬೆಗುಳಾಗಳೇ ಪೊಯ್ಗಳ್ಮ ॥
ತ್ತಾಗಳೆ ಸವಿಸುಸಿಲೆಸಗುವ
ಳಾಗಳೆ ಪಾಣ್ಬಂಗೆ ಸುರತ ಸುರಲತೆ ನಿಜದಿಂ ॥ ೨೬

ವೃ॥ ಮೆಲ್ಲನೆ ಬರ್ಪ್ಪಮೆಲ್ಲನಮರ್ದ್ದ*ಪ್ಪುವಮೆಲ್ಲನೆಚುಂಬಿಪಳ್ಕರಿಂ।
ಮೆಲ್ಲನೆ ನೋಳ್ಪ ಮೆಲ್ಲನುಸಿರಿಕ್ಕುವ ಮೆಲ್ಲನೆಲಲ್ಲೆಗೈವ ಮೇ ॥
ಣ್ಮೆಲ್ಲನೆ ಪಾಯ್ವ ಮೆಲ್ಲನೊಡಗೂಡುವ ಮೆಲ್ಲನೆಸೌಖ್ಯಮಾಂಪ ಶ ।
ಮ್ಮೆಲ್ಲನೆಗಳ್ತೆ ದೋರಿ ಪೊಸಜಾಣ್ಮೆಯ ಪಾಣ್ಬೆಯರಿರ್ದ್ದರೋಪರೊಳ್॥ ೨೭

ಕಂ॥ ಇಡಿದ ತಮಮೆಂಬ ಜಗುನೆಯ ।
ಮಡುವಿನ ಮಧ್ಯದೊಳೆ ಸುಳಿವ ಮೀಂಗಳಿವೆಂಬಂ ॥
ತಿಡಿ ಕಿರುದು ತುರುಗಿ ಮಿರುಗುತೆ ।
ಕಡುಸೊಗಸಂ ಪಡೆದು ಪರರೆ ತಾರೆಗಳಾಗಳ್ ॥ ೨೮

ವಚನ॥ ಮತ್ತಂ—

ಕಂ॥ ದಿನಮಣಿ ಯೆನ್ನೊಳಗಿರೆ ಮು।
ತ್ತಿನ ಮಣಿಯೇವಾಳ್ತೆಯೆಂದು ವನಸಿಧಿ ಪೊಸಮು ॥
ತ್ತಿನ ಮಣಿಗಳ ನಿದೆ ಚೆಲ್ಲಿದ ।
ನೆನೆ ಮಣಿನಿಭ ತಾರೆಗಳ್ಮನಂಗೊಳಿಸಿರ್ಕ್ಕು ॥ ೨೯

ಬಿಸಜಾಪ್ತನ ಬಿಸುವಿಸಿಲಿಂ |
ಬಸವಳಿದಾಕಾಶಂ ಕೇಶವಾಂಗದೆ ನಿಶೆಸಿಂ ||
ಪಿಸಿದ ಮಲಯರುಹ ರಸಕಣ |
ವಿಸರಂ ತಳ್ತಂತೆ ತಾರೆಗಳ್ಗೊಗಯಿಸುಗುಂ ||

ವೃ|| ಇನನಪರಾಂಬು ರಾಶಿಯೊಳೆ ಬೀಳ್ದಳಿಯುತ್ತಿರೆ ಕಂಡಗಲ್ಕೆಗಿ |
ರ್ಚ್ಚಿನ ಸೆಕೆಪತ್ತೆ ತಾಳಲಳವಲ್ಲದೆ ವಾಸರಲಕ್ಷ್ಮಿ ಕಣ್ಣನೀ ||
ರ್ವನಿಗಳನೈದೆ ಸೆಳ್ಳುಗುರ್ಗಳಿಂ ಮಿಡಿಯಲ್ಸಿಡಿದಲ್ಲಿ ತಳ್ತುವೆಂ |
ದೆನೆ ರಮಣೀಯ ವಾದುವಮರಾಧ್ವದೊಳೆಲ್ಲೆಡೆಯಲ್ಲಿ ತಾರೆಗಳ್ ||

ಕಂ|| ಸುರಪಶಿಖಿ ಶಮನನೈಋತಿ |
ವರುಣಾ ನಿಲ ಧನಪತೀಶ ರೊಲವಿಂ ಕೆದರ್ದಂ ||
ತಿರೆ ಪುಷ್ಪಾಂಜಲಿಯುಂ ಶಂ |
ಕರಂಗೆ ಸಂಧ್ಯಾನಟಂಗೆ ನೆಗೆದುದು ಭಗಣಂ ||

ವಚನ|| ಅನಂತರದಲ್ಲಿ —

ವೃ|| ನಳಿನಂಕುಂದೆ ವಿಕಾಸವೊಂದೆ ಕುಮುದಂ ಸೊಂಪಿಂದೆ ಚಂದ್ರೋಪ
ಜಳವುಂ ಬೀರೆ ಪಯೋಧಿ ವ[illegible] ವಿರಹಿವ್ರಾತಕ್ಕೆ ಕಾಯ್ಪೇರೆ ಕೋ ||
ಮಳೆಯ ಪ್ರ್ವಾಡೆ ಚಕೋರಿ ನೋಡೆ ಮದನಂ ಪಂಚಾಸ್ತ್ರಮಂ ಪೂಡೆ ಚ
ಪಳೆಯಜ್ಜೊರ್ಗೀಡೆಯ ರೋಡೆ ಮೂಡಿದುದು ತೇಜೋಮಂದಿರಂ ಚಂದಿರ

ಅಂಬರಪುಷ್ಪ ವಾಟಿಯೊಳರಲ್ದುಡು ಪುಷ್ಪಕದಂಬಮುಂ ಚಕೋ |
ರಾಂಬಕಿ ಪೂರ್ವದಿಗ್ವಧು ಕರಂ ತಿರಿಯಲ್ಕಡಮೆತ್ತಿ ನಿಳ್ಕಿರಾ ||
ಗಾಂಬರದಂತೆ ಸಂಜೆ ಸಸುಜಾರೆ ಜಲಕ್ಕನೆ ಪೊಣ್ಮಿದೊಂದುರೋ |
ಜಂ ಬಗೆವಂದು ರಂಜಿಪವೊಲುಜ್ಜ್ವಳವಾದುದು ಚಂದ್ರಮಂಡಳಂ ||

ವಚನ|| ಅಂತುಮಲ್ಲದೆಯುಂ—

ವೃ|| ಇದು ತಮವೆಂಬ ಶಂಬರಧಿಯಂ ಸಲೆ ಪೀರ್ವಮಹಾರ್ವವಹ್ನಿಯೊ
ಇದು ತಮಮೆಂಬ ಕರ್ಪ್ಪಿಡಿದಕಾನನಮಂ ಸುಡುವಗ್ನಿಪಿಂಡಮೋ ||
ಇದು ತಮಮೆಂಬ ಕೃಷ್ಣಭುಜಗವ್ರಜಮಂ ತವೆಕೊಲ್ವತಾರ್ಕ್ಷ್ಯವೋ |
ಇದು ತಮಮೆಂಬರಕ್ಕಸನ ನಿಕ್ಕುವ ಚಕ್ರವೊ ಚಂದ್ರಬಿಂಬಮೋ ||

ವಚನ|| ಮತ್ತಂ—

ಕಂ|| ತಿಮಿರ ಭ್ರಮರ ವ್ರಜಮಾ |
ಕ್ರಮಿಸಿರೆ ಭಗಣಪ್ರಸೂನ ಕುಲಕಿಂದ್ರ ದಿಶಾ ||

ರಮಣಿ ತೆಮರಲ್ಕೆ ಚಂಪಕ |
ಸುಮಕಂತುಕ ಮಿಟ್ಟಳೆನಿಸಿಕುಮಾವಿಧುಬಿಂಬಂ ‖ ೪೬

ಸಿಡಿದ ಕಿಡಿ ಬಳಸಿದುಡುಗಣ |
ಮದುರ್ಗ*ರಿ ಸಂಧ್ಯಾಂಶುವೆನೆ ತಮೋಯಮು ನೊಡಲಂ ‖
ಸುಡಲೆಸಪಕಾಲಶೂಲಿಯ |
ಕಿಡಿಗಣ್ಗೆಣೆವಂದುದರುಣರುಚಿ ವಿಧುಬಿಂಬಂ ‖ ೪೭

ಬಳಸಿದ ಕೆಂಬೆಳಗಿನಿಸಿನಿ |
ಸಳಿದುದು ಬೆಳ್ವೆಳಗು ಬಳೆದು ದೀಕ್ಷಿಸುವೆಳವೆ ‖
ಣ್ಗಳ ಕಣ್ಗಳ ನುಣ್ಬೆಳಗುಗ್ಗಿಗ |
ಳಳುರ್ದಂತಿರೆ ಮೂಡಿ ಮೋಹಿಸುವ ಮೃಗಧರನಾ ‖ ೪೮

ಒರಸೆ ಮದಮ್ಮೈದೆ ಪೊರೆದಂ |
ತಿರೆ ಕರೆಯುಡುರಾಜಿ ಫೂತ್ಕರಿಸಿ ದಂಬುಕಣೋ ‖
ತ್ಕರ ದಂತಿರೆ ಚಂದಿರ ನಿಂ |
ದಿರನಾನೆಯು ಪುಷ್ಕರಂಬೊಲೇ ಟೊಪ್ಪಿದನೋ ‖ ೪೯

ವೃ‖ ನೀಲನಭಸ್ಸ್ಥಳಾಚ್ಯುತ ಲಲಾಟ ತಟಚ್ಯುತ ರಕ್ತಧಾರೆಗ |
ಳ್ಪಾಲಿಡುತೊಕ್ಕು ಮಿಕ್ಕ ಪರೆದಂತಿರೆ ಪರ್ಬಿದಸಂಜೆಗೆಂಪು ತ ‖
ತ್ಕಾಲ ಕಪಾಲಪಾಣಿಧೃತಚಂದ್ರಕಪಾಲವೆ ಪೀರ್ದುದೆಂಬಿನಂ |
ಬಾಲರಸಾಲ ಪಲ್ಲವ ಸಮುದ್ಯುತಿ ತದ್ಯುತಿ ಪಿಂಗಿತಾಕ್ಷಣಂ ‖ ೫೦

ಅಮಿತಾಖಂಡಾಂತರಿಕ್ಷೋನ್ನತಸುತಶಿವಲಿಂಗಾಂಘ್ರಿಯಂ ನೋಡಲುದ್ಯ |
ತ್ನಮುಮೆಂಬಾಸೂಕರಾಕಾರದ ಹರಿ ಧರೆಯೊಳ್ಪೊಕ್ಕವೋಲ್ಪೋಗೆ ತಲ್ಲಿಂ ‖
ಗಮುಹಾಶೀರ್ಷಾಗ್ರಮಂ ನೋಡುವಜವದೆಮರಾಳಾಂಗಮಂತಾಳ್ದಜಂಸಂ |
ಭ್ರಮದಿಂ ಪಾರ್ವ್ವಂತೆಕಣ್ಗೊಪ್ಪಿದುದಮೃತಕಳಾಪೂರಿತಾಂಗಂಸುಧಾಂಗಂ ‖

ವಚನ‖ ಮತ್ತಂ—

ಕಂ‖ ಜೆನ್ನಾದುದಮೃತಕರಬಿಂ |
ಬಂನೋಳ್ಪರ ಕಣ್ಗೆ ಜೊನ್ನಮೆಂಬಮಹೇಶಂ ‖
ತನ್ನಮಿಯಚ್ಚಿಕುರದೊಳೆ ಸ |
ಮುನ್ನತಸಿತನೀರಜಾತಮಂ ಸೂಡಿದವೊಲ್ ‖ ೫೧

ವೃ|| ಭಗಣಮೌಕ್ತಿಕ ಧರಾಭೃಕೃಷ್ಣನಂ |
ದಗಿಯುಲಿಂದ್ರಹರಿದದ್ರಿಭಾಂಡದಿಂ ||
ತೆಗೆದು ತಾಳ್ದ ನವನೀತಪಿಂಡಮಂ |
ಬಗೆಯೆ ಪೋಲ್ತುದಮೃತಾಂಶುಮಂಡಳಂ || ೫೩

ವೃ|| ವ್ಯೋಮಶ್ರೀಪತಿಪಾಂಚಜನ್ಯಮುಡುಮಾಗಾರ್ಗಾರಮುಕ್ತಾಮಯೋ
ದ್ದಾಮಶ್ರೀಕಳಶಂ ನಭೋಂಬುಧಿ ಸಿತಾಂಭೋಜಂ ವಿಯದ್ದಂತಿವ ||
ಕ್ತ್ರಾಮೋದಾವಹ ಚಂದ್ರಕಾಂತಮುಕುರಂ ಚೆಲ್ವಾದುದಾಕಾಶಮಾ |
ರಾಮಾಜಾತಸಿತಾತಪತ್ರಮವದಾತಂ ಬಿಂಬಮುಬ್ಜಾರಿಯಾ || ೫೪

ಕಂ|| ಚಂಚಚ್ಚಕೋರಪಾಂಥ |
ವ್ರುರ್ಗಂಚುವಸಂಭ್ರಮದಿನೀಂಟಿ ರಜನೀಸತಿ ಶೋ ||
ಭಾಂಚಿತಹಿಮಕರಕಲಶದಿ |
ನೇಂ ಚಂದ್ರಿಕೆಯೆಂಬ ಜಲಮನೆರೆದಳೊ ನಭದೊಳ್ || ೫೫

ತಮಮೆಂದು ವಿಧುಂತುದನಾ |
ಮಮಸಿಟ್ಟ[illegible]ಗೆರುಚಿಯುನಾಂತುದಿದೆಂದಾ ||
ಹಿಮರುಚಿ ಕರದಿಂ ಸದೆದಂ |
ತಿಮಿರಮನಿನಿಸುಳಿಯದಂತೆ ಬಿಡದೆಲ್ಲೆಡೆಯೊಳ್ || ೫೬

ಎಳವಳಿಕನ ಕರಗದೊಳು |
ಜ್ಜ್ವಳಜಳಮಂ ತೀವಿ ರಜನಿ ಪರಿಮಳಕೆಂದು ||
ತ್ಪಳಮಿಳಿಪಿದೊಡದು ತೋರ್ಪ್ಪವೊ |
ಲಳಿಮಳಿಸಂ ಶಶಿಕಳಂಕಮೇಂ ರಂಜಿಸಿತೋ || ೫೭

ವೃ|| ಭುವನಮನೆಲ್ಲಮಂ ಪುದಿದು ತೀವಿದಚಂದ್ರಿಕೆಯೆಂಬ ಪಾಲ್ಗಡ |
ಲ್ತವಕದಿನೆನ್ನ ಪುತ್ರನನಿಳಾಜನಮಿಾಕ್ಷಿಸೆ ದೃಷ್ಟಿಪಾತದಿಂ ||
ನವೆದಪನೆಂದು ತೂಪರಿದಶೀಕರದಂತಿರೆ ತಾರಕಾಳಿಯೊ |
ಪ್ಪುವಪಣೆಗಿಟ್ಟಕಜ್ಜಳದ ಬೊಟ್ಟೆನಲೊಪ್ಪಿದುದಿಂದುಲಾಂಛನಂ || ೫೮

ತಿಮಿರೋದ್ಯದ್ಯಮುನಾತರಂಗಿಣಿ ಪಿತಂ ತಾನೆತ್ತ ಪೋದಂ ಗಡೆಂ |
ದು ಮಹಾದುಃಖದಿನೆಂಟುದಿಕ್ಕಿನೊಳೆ ನೋಡುತ್ತಿರ್ಪ್ಪದುಂ ಕೂಡೆ ಚಂ ||
ದ್ರಮನಾರಕ್ತತೆವೆತ್ತು ಮುತ್ತುದಿಸೆ ತಾತಭ್ರಾಂತಿಯಿಂದಪ್ಪಿದ |
ಕ್ಕ್ರಮದಿಂದೆಂಬವೊಲಿಂಬುವೆತ್ತುದು ಕಳಂಕಂ ತತ್ಸುಧಾಧಾಮನಾ || ೫೯

ಗಿರಿಶಲಲಾಟಲೋಚನಧನಂಜಯನಿಂ ಪರಿದಗ್ಧನಾದಭಾ |
ಸುರಕುಸುಮೇಷುಪಂಕರುಹನಾಭನ ನಾಭಿಸಿತಾಂಬುಜಾತದೊಳ್ ||
ಮರಳಿ ಜಲಕ್ಕನುದ್ಭವಿಪನೆಂಬವೊಲೊಪ್ಪಿದುದಭ್ರಮಧ್ಯದೊ |
ಳ್ಕರಮೆಸೆದಿರ್ಪ ಚಂದ್ರಮನ ನುಣ್ಗರೆ ನೋಳ್ಪೊಡದೊಂದುಚೆಲ್ವಿನಿಂ || ೬೦

ಕಂ|| ಇದು ಪೂರ್ವದಿಶಾವಧುವೆ |
ತ್ತಿದಶಶಿಮಣಿಮುಕುರಮಮೃತಕರಮಂಡಳಮು ||
ಲ್ತಿದು ಚಿಹ್ನಮಲ್ತುಮಧ್ಯದೊ |
ಳೊದವಿದಮಾಪ್ಪೊರ್ಳವು ವಿಷ್ಣುಪದವಿಷ್ಣುವಿನಾ || ೬೧

ವೃ|| ಚಂದ್ರಿಕಾಜಲಧಿ ತೀವಿ ಲೋಕಮಂ |
ಸಾಂದ್ರಮಾಗಿ ಸೆಗೆದುರ್ವೆ ಭೀತಿಯಿಂ ||
ಚಂದ್ರಮಧ್ಯವಟಪತ್ರದಲ್ಲಿ ಲ |
ಕ್ಷ್ಮೀಂದ್ರನಿರ್ಪನೆನೆ ಲಕ್ಷ್ಮವೊಪ್ಪುಗುಂ || ೬೨

ದೆಸೆವೆಣ್ಗಳಂಗಮಂ ಮಿಗೆ |
ಮುಸುಕಿದ ತಿಮಿರಗ್ರಹಂಗಳ್ ಕೂಪ್ಪಿಂದೋ ||
ಡಿಸಿದಂ ಮೃಗಾಂಕ ಮಾಂತ್ರಿಕ |
ನಸಮಜ್ಯೋತ್ಸ್ನಾವಿಭೂತಿಯಂ ತಳಿದಾಗಳ್ || ೬೩

ಎರಳೆವರಿ ತನ್ನ ಕೋಡಿ |
ಟ್ಟೊರಸಿದೊಡೆ ಸುಧಾಂಗನಂಗಮಂ ಸೀಳ್ದೆಡೆಯಿಂ ||
ಸುರಿದು ಪಸರಿಸಿತೊ ಪೊಸಪಾ |
ಲ್ಸರಿಯೆನೆ ಬೆಳ್ದಿಂಗಳ ಮಿಳಿದದೇಂ ಮುಸುಕಿದುದೋ || ೬೪

ವೃ|| ಮಿಸುಪನಿಶಾನಿತಂಬಿನಿಗೆ ಬೆಳ್ಪುಡೆ ಯಾದುದು ಭಾನುರೋಚಿಯಿಂ|
ಬಸವಳಿದೀಧರಾಂಗನೆಗೆ ಚಂದನಲೇಪನಮಾದುದಂಬುಜ ||
ಪ್ರಸರದಗಲ್ಕೆಯಿಂ ನೆಗೆದ ತುಂಬಿಗೆ ಮಲ್ಲಿಗೆಮಾಲೆಯಾದುದಾ |
ಪಸಿದಚಕೋರಿಗಳ್ಗೆ ಸುಧೆಯಾದುದು ಕಾಂತಿ ಸುಧಾಮಯೂಖನಾ|| ೬೫

ಮೊಗೆಮೊಗೆದೀಂಟಿ ಯಿಾಂಟಿ ತನುಮಧ್ಯಕೆ ತಳ್ವದೆ ಸುತ್ತಿಸುತ್ತಿ ವೇ |
ಣಿಗೆ ಮಿಗೆ ಸೂಡಿಸೂಡಿ ಲಲಿತಾಂಗದೊಳೊಯ್ಯನೆ ಪೂಸಿಪೂಸಿ ಮೆ ||
ಲ್ಲಗೆ ಬಿಡದೆರ್ಬ್ಬಿಯೆರ್ಬ್ಬಿ ಬಗೆದಂದು ಮುಳುಂಗಿಮುಳುಂಗಿ ಕೌತುಕಂ |
ಬಗೆಗೊಳೆ ನೋಡಿನೋಡಿ ನಲಿದತ್ತಬಳಾಜನಮಚ್ಚಜೊನ್ನಮಂ || ೬೬

ಧರೆಯೆಲ್ಲಂ ಚಾರುಚಂದ್ರೋಪಳ ವಿರಚಿತಮಾದಂತೆ ತೋರ್ದತ್ತುಮೇಲಂ |
ಬರಮೆಲ್ಲಂ ಕೂಡೆ ಧೌತಾಂಬರದ ನವವಿತಾನಂಬೊಲಿಂಬಾದುದಾಶೋ ||
ತ್ಕರಮೆಲ್ಲಂ ಚಂದನಾಲೇಪನದೆ ಬಳಿದವೋಲೊಪ್ಪುತಿರ್ದತ್ತು ಧಾತ್ರೀ |
ನರರೆಲ್ಲಂ ಚಂದ್ರಸಾರೂಪ್ಯಮನೆ ಪಡೆದರೆಂಬಂತೆ ಕಣ್ಗೊಪ್ಪುತಿರ್ದರ್ || ೬೭

ಗಗನಮೆನಿಪ್ಪ ಪಾಳ್ಗೊಳದೊಳರ್ಕಸಮುದ್ಧೃತಿಗೈದು ಸಂಜೆಯೆಂ |
ಬಗಿನಿಯನಿಟ್ಟು ಮುಬ್ಬೆನಿಪ ಗೊಬ್ಬರಮಂ ತಳಿದಲ್ಲಿ ಚೆಲ್ಲಿ ತಾ ||
ರಗೆಗಳೆನಿಪ್ಪ ಬಿಳ್ತುಗಳ ನಂತವ ಕೈಂದವ ಬಂಬರೌಪ್ಯ ಕುಂ |
ಭಗತಸುಧಾಮರೀಚಿ ಜಳಮಂ ಸುರಿದಂ ಸಲೆ ಕಾಲಪಾಮರಂ || ೬೮

ಇದು ಚಂದ್ರಾತಪಮಲ್ತು ತೀವಿದಸುಧಾವಾರಾಕರಂ ಮೇಲೆ ತೋ |
ರ್ಪುದಿದಂಭೋಜವಿರೋಧಿಮಂಡಳಮಾ ಮಲ್ಲೀಸುತಿರ್ಪಂಚೆ ಮ ||
ತ್ತಿದು ತಾಂ ಲಾಂಛನಮಲ್ತು ತದ್ವದನ ದೊಳ್ಕಚ್ಚಿರ್ದ ನೀಲಾಬ್ಜಮಿಂ |
ತಿದು ತಾರಾತತಿಯಲ್ತು ಪಕ್ಷಯುಗಳ ವ್ಯಾಕೀರ್ಣಬಿಂದುವ್ರಜಂ || ೬೯

ವ|| ಎಂಬಸಂಭ್ರಮಮನಪ್ಪುಕೈದೊಪ್ಪುವ ಸಾಂದ್ರಚಂದ್ರಿಕಾಸಂಪದಮನಭೀಕ್ಷಿಸಿ-

ವೃ|| ಅವಧರಿಸೆನ್ನ ಬಿನ್ನಪಮನುರ್ವಿಪ ಪರ್ವದ ಪಾರ್ವಣೇಂದುಸಂ |
ಭವನವರುಂದ್ರಚಂದ್ರಿಕೆಯೊಳಿಂಪುದು ರಾತ್ರಿ ವಿಹಾರಕೇಳಿಯಾ ||
ತ್ಸವಮನೆನುತ್ತೆ ಕೈಮುಗಿದ ನಾಗರಿಕಂ ಗುಡಲಿತ್ತು ತಳ್ವದೇ |
ಳ್ದವನಿಪರೂಪ ಪಂಚಶರ ಸೋಲಗದಿಂ ನಡೆತಂದ ನಳ್ತಿಯಿಂ || ೭೦

ವ|| ಅಂತೈತಂದಂತಃಪುರಮಂ ಪೊಕ್ಕು ಸುಗಂಧೋದಕ ಕೃತಸ್ನಾನನುಂ ವಿಭೂತಿ ರುದ್ರಾಕ್ಷ ವಿಳಸಿತ ಕಳೇವರನುಂ ಪರಿರಚಿತ ಶಿವಲಿಂಗಸಮರ್ಚನ ತತ್ಪ್ರಸಾದ ಪಾದೋದಕಾಸ್ವಾದನ ಸಂತುಷ್ಟಹೃದಯನುಂ ಸಾರಕರ್ಪೂರ ಸುರಭಿ ಪರಿಮಿಳಿತ ತಾಂಬೂಲ ನಿಜಮುಖಾಂತರ್ವಳಯನುಂ ಸರಸ ಪರಿಮಳ ಮಧುರ ಮಾಲತೀ ಮಾಲಿಕಾಲಂಕೃತ ಮನೋಜ್ಞ ಕಬರೀಭರನುಂ ಮೃಗಮದ ಲಲಾಮಲಸಿತ ಲಲಾಟ ತಟನು ಮಮಳಮೌಕ್ತಿಕ ಕರ್ಣಾಭರಣ ಕಮನೀಯ ಮುಖಮಂಡಳನುಂ ಭಗಣಭಾಸುರ ರುಚಿ ನಿಚಯ ನಿಚಿತರುಚಿರತರ ತಾರಾಹಾರ ರಮಣೀಯ ವಿತತೋರಸ್ಥಳ ನುಮತಿ ವಿಶದ ವಜ್ರಮಣಿ ಖಚಿತ ಕಂಕಣಾಭಿರಾಮ ಕರಾಗ್ರನು ಮನೇಕ ಮಣಿಗಣಾಗಣಿತ ಭೂಷಣ ಭೂಷಿತಾವಯವ ನುಮಭಿನವ ಕಸ್ತೂರಿಕಾ ಕಾಶ್ಮೀರ ಕರ್ದಮಾನುಲಿಪ್ತ ಪಕ್ಷಸ್ಥಳ ನುಮತಿನವೀನ ದಿವ್ಯಾಂಬರಾವೃತ ಸೌಂದರ್ಯ ವಿಗ್ರಹನು ಮಾಗಿ ನಾಗರಿಕಾದಿ ಭೋಗಸಖರಿಂದ ನುಕೂಲದಕ್ಷಿಣ ದುಷ್ಟಶಠರೆಂಬ ಶೃಂಗಾರರಸ ಪ್ರಧಾನ ನಾಯಕರಿಂ ಧೀರೋದಾತ್ತ ಮುಖಸರ್ವ ರಸಪ್ರಧಾನ ನಾಯಕರಿಂದಾವೃತನಾಗಿ ರಾಗದಿಂ ಸಚಿವಸುತಸಮೇತಂ ಚಂದ್ರಿಕಾವಿಹರಣಂಗೈಯಲ್ಕ ನಂದಂದುನೃಪೇಂದ್ರ, ಚಂದ್ರನಿಜ

ಕಟಾಕ್ಷವೀಕ್ಷಣ ಸಾಂದ್ರಚಂದ್ರ ಚಂದ್ರಿಕಾದ್ವಿಗುಣಿತ ಚಂದ್ರಿಕಾವಿಳಾಸನುವಾಗಿ ಮದನ ಮದಮಧುಕರ ಮಧುರ ಮಾಲತೀ ಮಾಲಾನುಕಾರಿಯಂ ಸೂಳಿಗೇರಿಯಂ ಪುಗುತಂದಿಂದ್ರದಿಗ್ಭಾಗದೊಳಂದಂಬಡೆದಿಂದುಬಿಂಬಮನವಲೋಕಿಪಾಗಳ್ನಾಗರಿಕಂ ಕೈಮುಗಿದಿಂತೆಂದಂ—

ಕಂ|| ಜೊನ್ನಂಪಾಲ್ಗಡಲಂತಿದೆ |
ಜೊನ್ನೊಡಲಂ ನಳಿನನಾವೆಯಂತಿದೆಚಿಹ್ನಂ ||
ತೆನ್ನಂಪೆತ್ತಳ ತವರೆನು |
ತುಂ ನೋಡಲ್ಕಳರ್ವ*ಮದನನಂತಿದೆ ನೃಪತೀ ||      ೭೧

ವಚನ|| ಅಂತುಮಲ್ಲದೆ—

ವೃ|| ಸಂಜೆಗೆ ರಾಗಮಾಗೆ ನಗೆ ನೈದಿಲಮಂದತಮೋಸಿತಾಂಬರಂ |
ತಾಂ ಜರಿದೊಪ್ಪೆ ರಾತ್ರಿಗುಡುಘರ್ಮಪಯಃಕಣಮೋಳೆ ಮೈಯೊಳೆ ||
ತ್ತಂ ಜವದಿಂ ನಭಸ್ಸ್ಥಳಿಗೆ ಸೋಂಕಿ ಕರಾಗ್ರದೆಕಣ್ಗೆ ರಂಜಿಪೀ |
ಮಂಜುಳಚಂದ್ರಮಂಗೆ ಮಹಿಯಲ್ಲಿ ಕಳಾನಿಧಿನಾಮಮೊಪ್ಪದೇ ||      ೭೨

ವಚನ|| ಎನೆ ಮುಗುಳ್ನು ಮತ್ತಮೊರ್ವನಿಂತೆಂದಂ—

ವೃ|| ದ್ವಿಜಚಕ್ರಕ್ಕನಿಮಿತ್ತಮಾತ್ಮಕರದಿಂ ಸಂತಾಪಮಂ ಮಾಡಿಯುಂ |
ದ್ವಿಜರಾಜಂ ಕಮಲಾರಿಯಾಗಿ ವಿಧು ಹಂಸದ್ವೇಷಿ ಮೇಣಾಗಿಯುಂ ||
ನಿಜದಿಂದಬ್ಜನಭಂಗಲಕ್ಷ್ಮಣಯುತಂ ತಾನಾಗಿ ದೋಷಾಕರಂ |
ರಜನೀಸಂಚರನಾಗಿಯುಂ ಕುವಲಯಾಪ್ತಂ ನೋಡಿದೇಂ ಚಿತ್ರಮೋ|| ೭೩

ವಚನ|| ಎನೆ ಕೇಳ್ದು ಮಿತವಚನನಿಂತೆಂದಂ—

ವೃ|| ದ್ವಿಜರಾಜಾಭಿಧೆಯೊಪ್ಪದೇ ಸಸಿತಪಕ್ಷಂಗೇನನಂತಾಶ್ರಯಂ |
ಗೆ ಜಗದ್ವಿಶ್ರುತಮಾಗದೇ ವಿಧುಸಮಾಖ್ಯಾನಂ ಘನಶ್ರೀಯುತಂ ||
ಗೆ ಜನಂ ಮೆಚ್ಚದೆಯಬ್ಜನಾಮಮಸೆ ದಲ್ದೋಷಾಕರಾಹ್ವಾನಮೀ |
ರಜನೀಚಾರಿಗೆ ಸಲ್ಲದೇ ಕುವಲಯಾಪ್ತಂ ರಾಜನೇಸಲ್ಲನೇ ||      ೭೪

ವಚನ|| ಎಂದು ಮತ್ತಮಿಂತೆಂದಂ—

ಕಂ|| ಕುವಲಯಕಧಿಪತಿಯಪ್ಪನೆ |
ತವೆ ಲಕ್ಷಣಯುಕ್ತನಲ್ಲದಿರ್ದೊಡೆ ರಾಜಂ ||
ಕುವಲಯ ಕಧಿಪತಿಯಪ್ಪನೆ |
ತವೆ ಲಕ್ಷಣ ಯುಕ್ತ ನಲ್ಲದಿರ್ದೊಡೆ ರಾಜಂ ||      ೭೫

ಸುರತಿ ವರಚಕ್ರ ರುಚಿವಿ |
ಸ್ಫುರಿತ ಸಿತದ್ಯುತಿ ಮಹೋತ್ಪಳ ಪ್ರಿಯಮಿತ್ರಂ ||
ವರಮಂಡಳಾಂಕನೀಹಿಮ |
ಕರನೆಸೆದಪನಾದಿನೇಶನೆನೆ ನೋಡರಸಾ || ೭೬

ವಚನ|| ಎಂಬಚತುರವಚನ ನಿಚಯಮಂ ಕೇಳ್ದು ಮಚ್ಚುತ್ತುಂ ಮನುಜಮನೋಜನಲ್ಲಿಂ ಮುಂದಣ್ಗೆ ನಡೆತರುತ್ತಿರೆ ತೊಟ್ಟನೆ ಕಟ್ಟದಿರೊಳ್—

ವೃ|| ಮತವಾರಸ್ತ್ರೀಕುಚಾಗ್ರಚ್ಯುತ ಮೃಗಮದಕಾಶ್ಮೀರಕರ್ಪೂರಧೂಳೀ
ಕೃತ ಧೂಳೀಕೇಳಿಚಂಚದ್ಭ್ರಮರ ಚಲಶಿಖಂಡಂ ತದೀಯಾಲಯಾಲಂ ||
ಬಿಶಘಂಟಾನಾದ ಕೋಲಾಹಲರುತಿ ವಿದಳತ್ಕೈರವಾನೀತ ಮಧ್ವಂ |
ಚಿತಲಾಲಂ ಲೀಲೆಯಿಂ ಬಾಲಕನೆನೆ ಸುಳಿದಂ ಸ್ವೈರಚಾರಂ ಸಮೀರಂ ||೭೭

ವಚನ|| ಅಂತು ಸುಳಿವ ಮಂದಾನಿಲನಂ ಮನದಳ್ಕರಿಂದಾಲಿಂಗಿಸುತುಂ ಬರೆವರೆ ಮದನ ಮಹಾರಾಜನ ಮನ್ನಣೆಯ ವಿಳಾಸಿನಿಯ ರೊಂದುಗೂಡಿ—

ವೃ|| ತರಳಾಪಾಂಗಪ್ರಕಾಶಂ ಕೆದರೆ ಮದಣಬಾಣಂಗಳಂ ಮಂಜುಮಂಜೀ |
ರರವಂ ಕಂದರ್ಪಬಾಣಾಸನಪ[illegible]ಾರುಚಿಯಂ ಸೂಸೆ ಮಂದಸ್ಮಿತಂ ಶಂ ||
ಬರಸಂಹೃತ್ಕೀರ್ತಿಯಂಮುಂತಡರತಿಪಲಸತ್ತ್ರೇಜಮಂ ಬೀರೆ ಬಿಂಬಾ |
ಧರರಾಗಂರಾಗಮಂನೋಳ್ಪರೊಳಿಪಡೆಯುತುಂ ಪೋಯ್ತುಪಣ್ಯಾಪ್ರತಾನಂ||

ವಚನ|| ಅದನಾನಾಗರಿಕನರಸಂಗೆ ತೋರುತ್ತೈತರುತ್ತಿರೆಯಿರೆ—

ವೃ|| ಮನೆಮನೆದಪ್ಪದೊಪ್ಪಿದುದು ಮಾರನ ಪೆಂಪು ಮಹೋತ್ಸಲಾಸ್ತ್ರಕೀ |
ರ್ತನೆ ಮಕರಾಂಕ ಸಂಭ್ರಮಮನಂಗನ ಕೂರ್ಪುಮನೋಜ್ಞ ಪುಷ್ಪಧ ||
ನ್ವನ ಬಿರುದಾಂಕಮಾಲೆ ಮಧುಮಿತ್ರನ ಪೂಜೆ ಮನೋನಿವಾಸನಿಂ |
ಪಿಸಕಥೆ ಮನ್ಮಥಕ್ಷಿತಿಪನಾಪ್ಪರ್ವಮನೋಜನ ಮಂಗಳೋತ್ಸವಂ || ೭೯

ವಚನ|| ಮತ್ತಮಲ್ಲಿ—

ವೃ|| ನಗೆವೆಳ್ಪಿಂಬೆಳಜೊನ್ನಮಂ ಪರಪಿ ಕಾಂತಾಸ್ಯಾಂಬುಜಾತಂಗಳಂ |
ನಗಿಪಭೂಷಣ ರೋಚಿರಾತಪಮನಾಗಳ್ಬೀರಿ ಕೂರ್ತೀಪರ ||
ಕ್ಷಿಗಳೆಂಬುತ್ಪಳಮಂ ಮರಲ್ಚುವರೆಜಸ್ರಂ ತಮ್ಮಮೊಗೆಂಬಸಂ |
ಪಗೆಯಿಂ ಮುಚ್ಚಿರ್ಪರಾಣ್ಮದುಂಬಿಗಳನೇಸಂ ಮಾಡರಬ್ಜಾಕ್ಷಿಯರ್ || ೮೦

ನಗೆಗೆಣ್ಣೋ ನವನೀಲ ನೀರರುಹಮೋ ರಾಕಾನಿಶಾಕಾಂತನೋ |
ಮೊಗವೋ ಚೆಂದುಟಿಯೋ ರಸಾಲದಳಮೋಂಥಮಿಲ್ಲಮೋ ಕಾರಕ ||

ಮ್ಮಾರ್ಗಿಲೋ ಪೊಂಗಳಸಂಗಳೋ ಮೊಲೆಗಳೋ ಕುಂಭೀಂದ್ರಕುಂಭಂಗಳೋ
ಬಗೆಗೊಳ್ವೀಜಘನಂಗಳೊ ಎನೆ ವಿಟರ್ವಿಭ್ರಾಜಿಕುಂ ವೇಶ್ಯೆಯರ್ ‖ ೮೧

ವೃ‖ ಕೊರಲೊಳ್ಕೊಂಕಿನ ಮಾತು ಮುದ್ದು ಮೊಗದೊಳ್ಮಂದಸ್ಮಿತಂನೋಡದಂ|
ತಿರೆ ನೋಳ್ಪೊಂದು ವಿಡಾಯಮಕ್ಷಿಯೊಳೆ ಪುರ್ಬೊಳ್ಗರ್ಬು ಸೌಗಂಧಬಂ ‖
ಧುರಮಂದಶ್ವಸಿತಂ ಸುನಾಸಿಕೆಯೊಳೆಂದುಂ ಯೌವನಶ್ರೀವಿಳಾ |
ಸರುಚಿಸ್ಫೂರ್ತಿ ನಿಜಾಂಗದೊಳ್ಮೆರೆಯೆ ಕಣ್ಗಿಂಬಾದರಬ್ಜಾಕ್ಷಿಯರ್ ‖ ೮೨

ನಗೆನೋಟಂ ಪೊಸಮಾತು ರೀತಿಗೆಮಕಂ ಗಾಂಭೀರ್ಯಮೌದಾರ್ಯಮು
ಚ್ಚಿಗಮುತ್ಸಾಹಮಲಂಪು ಸೊಂಪು ಸೊಗಸೊಯ್ಯಾರಂ ಬೆಡಂಗಳ್ಕರ ‖
ಪ್ಪುಗೆಚೆಲ್ಲಂ ಚೆದುರೋಜೆ ಚಾಟುತನಮಂದಂ ಬಂದಮೊಳ್ವೇಟಮಿ |
ಚ್ಛೆಗೆಸಂದೊಂದುವ ಕೂಟಮೆಲ್ಲಮವರ್ಗೆ*ಂಪ್ಪೆಸಂದು ಮುಚ್ಚಿರ್ದುದೋ‖

ವಚನ‖ ಮತ್ತಮಿಂತೊಪ್ಪುವಸಿಂಗರದ ಸೀಮೆಯೆನಿಪಭಾಮಿನಿಯ ರೊಳೊರ್ವ್ವಕಾಮಿನಿ
ಯೊತ್ತಗೊಳಲೆಂದು ನಿಜಗೃಹದ್ವಾರದ ಮಣಿಮಯ ಸ್ತಂಭಮಂ ನೆಮ್ಮಿ—

ವೃ‖ ನಗೆಮೊಗಮಿಟ್ಟ ಕುಂಕುಮದಬೊಟ್ಟು ತುರುಂಬಿದಜಾದಿದೋರೆವ |
ಲ್ಮೃಗಮದದಣ್ಪು ತೊಟ್ಟಸವಕಂಚುಕಮುಟ್ಟ ...ರಾಂಬರಂ ಕರಂ ‖
ಝುಗಝುಗಿಪಚ್ಚರನ್ನದೊಡವೊಪ್ಪುವಮಾಣಿಕಗೊಪ್ಪುಚೊಲ್ಲೆಯಂ |
ಬಗೆಗೊಳಿಸಿಪ್ಪಸೋರ್ಮುಡಿ ಘನಸ್ತನವೊಪ್ಪಿರೆ ನೀರೆ ತೋರಿದಳ್ ‖ ೮೪

ವಚನ‖ ಮತ್ತಮೊರ್ವ್ವಳಗಣ್ಯಲಾವಣ್ಯ ತಾರುಣ್ಯವತಿ—

ವೃ‖ ಬಡನಡು ಬಟ್ಟಬಲ್ಮೊಲೆ ಬಳಲ್ಮುಡಿ ನಲ್ನುಡಿ ನೀಳ್ದಕಣ್ಮರ |
ಲ್ನಿಡುಮೆರಲಿಂಪು ಸೊಂಪಿಡಿದ ಚಂದುಟಿ ನುಣ್ದೊಡೆ ಚೆಲ್ವುದಾಳ್ದಮೆ ‖
ಲ್ಲಡಿಕಡುಬಿಣ್ಪುಮೆತ್ತಮಾತುರ್ರುಗಿದ್ದವೆ ಸಣ್ಣಪುರ್ಬ್ಬತ್ತೆ |
ಳ್ಪೊಡೆ ಸುಲಿಪಲ್ಗಳಂದದ ಕದಂಪಿರದೊಪ್ಪಿರೆ ಕಣ್ಗೆ ತೋರಿದಳ್ ‖ ೮೫

ವಚನ‖ ಮತ್ತಮೊರ್ವ್ವಳಪೂರ್ವಸೌಂದರ್ಯಸೌಭಾಗ್ಯವತಿ—

ವೃ‖ ತೊಡೆದಜವಾದಿಯಿಂ ಮುಡಿದಕಮ್ಮರಲಿಂ ಪಿಡಿದಂಬುಜಾತದಿಂ |
ಜಡಿವಸಿತಂಬದಿಂ ನುಡಿವಕೈಗಿಳಿಯಿಂ ಕೊಡದಂದಮಾಗಿ ಪೆಂ ‖
ಪಡರ್ದಕುಚಂಗಳಿಂ ಕುಡಿತೆಗಂಗಳಿನಿಂಪಿಡಿದಾಸ್ಯ ಬಿಂಬದಿಂ |
ಬಡೆನಡುವಿಂದೆ ಚೆಲ್ವಿಡಿದ ಪೆಣ್ಮಣಿಯಂ ನಡೆನೋಡದಂ ನೃಪಂ ‖ ೮೬

ವಚನ‖ ಮತ್ತಮೊರ್ವ್ವಳ್ಪ್ರೀತ್ಯುತ್ತಸ್ತನೆ ಚಿತ್ತಜನಮತ್ತಕಾಶಿನಿಯಂತೆ ಮುತ್ತಿನ ಮತ್ತವಾ
ರಣಮಂ ತ್ರಿಭಂಗಿಯಿಂ ನೆಮ್ಮಿನಿಂದು—

ವೃ|| ಮೇಲಂಗೈದುವ್ವಿರ್ಸುತೆ ಸುತಿಯಂ ವೀಣೆಯಂವಕ್ಷದೊಳ್ಮೇ |
ಣಾತ್ತಳುತ್ತುಂ ಪೆರ್ಮೊಲೆಗೆ ಮೊಲೆ ತಾಂಪುಟ್ಟಿ ತೆಂಬಂತೆ ತೋರಲ್ ||
ಕೇಳಲ್ಕೆಂದೈತರೆ ವಿಟಮೃಗಂ ಬಾಜಿಸುತ್ತಿರ್ದ್ದಳೊರ್ವ್ವ |
ಳ್ವೇಳಾವಳ್ಯಾದ್ಯಖಿಳವಿಲಸದ್ರಾಗಮಂ ರಕ್ತಿಯಿಂದಂ || ೮೭

ವಚನ|| ಅಲ್ಲಿ ಪೆರಳೊರ್ವ್ವಳ್ಬಾಣೆ ವೀಣೆಯಂ ಶ್ರುತಿಗೈದು ಸೋರೆಯಂ ಸ್ತನಾಗ್ರದೊಳ್ಕೊಂಕಿ ಸರಳತರ ಕರಾಂಗುಲಿಯನಿಟ್ಟು—

ಕಂ|| ಸುಲಲಿತೆ ವರಾಳಿಕುಂತಳೆ |
ವಿಲಸತ್ಕಲ್ಯಾಣಿ ಶಂಕರಾಭರಣಸಮು ||
ಜ್ಜ್ವಲವೇಣಿ ರಾಗರಂಜಿತೆ |
ಚಲಿಸದೆ ಪೊಸದೇಸಿ ಸೋಮಮುಖಿ ಬಾಜಿಸಿದಳ್ || ೮೮

ವಚನ|| ಅದಂ ಕೇಳ್ದು ಮೆಚ್ಚುತ್ತುಂ ಸಂಗೀತಸರ್ವಜ್ಞಂ ಮುಂದೆಣೆ ನಡೆತರುತ್ತು ಮಿರೆಯಿರೆ ನಿಜಗೃಹದ ಮುಂದಣಮಣಿಯಾಂಕಣ ದೊಳ್ವಿದಗ್ಧೆಯನ್ನೆರೆದೆಳೆವೆಣ್ಗಳೊಡಗೂಡಿ ಗಾಡಿಯಿಂ ನಿಂದು ಶಶಿಕಾಂತದೊರಳೊಳ್ಕೆಂಬರಲ್ಕೆಸಕ್ಕಿಯಂ ಪೊಯ್ದಿಂದ್ರನೀಲದೊನಕೆಯಂ ನಿಡುದೋಳ್ಗಳಿಂ ನೆಗಪಿ—

ತ್ರಿಪದಿ|| ಮದ[illegible] ಜಯಮಕ್ಕೆ ಮಧುಗೆ ಸಂಪದಮಕ್ಕೆ |
ಬಿದುಗದಿರಿಂತು ನೆಲಸಿರ್ಕ್ಕೆರತಿಗೆ ಸಂ |
ಮದಮೆಂದು ತೊಲಗದಿರುತಿರ್ಕ್ಕೆ || ೮೯

ಮನದಿಚ್ಛೆಯಿಂ ಮುಂಚಿ ತನುವಿತ್ತು ನಲ್ಲರೊಂ |
ದನುವರಿದೊಂದಿ ಸವಿದೊಪ್ಪ್ವಸೂಳೆಯರಾ |
ಮನೆಯ ಮುಂದಿರದೆ ಸುರಧೇನು || ೯೦

ಸುರತಕ್ಕಿಚ್ಛೈಸಿ ಮೇಲ್ವರಿವಕಾಂತನ ಕಂಡು |
ಕರಗಿ ಕಾತರಿಸಿ ನೆರೆವನೀರೆಯ ಮನೆ |
ಸಿರಿಗಂಬುಜಾತಮೆನಿಸದೇ || ೯೧

ಪೊರಮಿಂಚುಗೈವನಂ ಬರುವಾತುಗಾರನಂ |
ಕರುಬನಂ ಕಪಟಹೃದಯನಂ ಧೂರ್ತನಂ |
ತೊರೆಯದುದೆಗ್ಗತನವಲ್ತೆ || ೯೨

ಒರ್ವ್ವನೊಳ್ವೊಂಚಿಸಿ ಕೊರ್ವ್ವಿದಬೇಟವು |
ನೊರ್ವ್ವನೊಳಿಲ್ಲದಿದೊರ್ಪ್ಪಿಡಂ ತನಿವೇಟ |
ಮುರ್ವ್ವಿಸಿ ಪಣವಂ ಪಡೆವುದು || ೯೩

ತಾನೇ ಮೇಲಿಕ್ಕದೆ ಮಾನವಂ ಬಲಿದು ಕಾ |
ಮಾನುರಾಗತೆಯ ಮನಕಿತ್ತು ಮೇಲಿಕ್ಕ |
ಲಾನೇಮವರಿದು ಸೇರೆವುದು || ೯೪

ನಗೆನೋಟನುಡಿಗಳಿಂ ತೆಗೆದು ಭುಜಂಗರ |
ಬಗೆಯ ಬಂದವರೊಳೊಡಗೂಡಿ ಮೋಹಿಪ |
ಳ್ಮಗುಳಂಬಸರಸಿಗೆಣೆಯಲ್ತೆ || ೯೫

ಸ್ತನದ ಬಿಣ್ಪನೆ ನೋಡಿ ಮನಮಿಕ್ಕುವವ್ವಿರ್ಟ |
ರ್ಕನಕಪಂಕಜದ ಬಿರಿಮುಗುಳನೆ ನೋಡಿ |
ಮನಮಿಕ್ಕುವಂತೆ ಮರಿದುಂಬಿ || ೯೬

ಚದುರಂಗನೆತ್ತಮಿಂಪೊದವಿದಪಾಡು ಸ |
ಕ್ಕದದೋದು ಹಾಸ್ಯಮಿನಿಗಬ್ಬಮೊಳ್ಪದಿ |
ಲ್ಲದಸೂಳೆವನೆಯೆ ಬರುವನೆ || ೯೭

ವಚನ|| ಎಂದು ಸುವ್ವಿವಾಡನೆವದಿಂ ವೇಶ್ಯಾನಿ[illegible]ಯುನೆಳೆವೆಣ್ಗಳ್ಗುಪದೇಶಿಪ ವಿದಗ್ಧೆಯರ ವಿಳಾಸಮನಿಳಾಪತಿತಿಳಕಂ ನಿರೀಕ್ಷಿಸುತ್ತುಂ ಬರುತ್ತಿರೆ ಮುಂದೊಂದೆಡೆಯಲ್ಲಿ—

ವೃ|| ಮೊಳೆವೆಳೆಲಜ್ಜೆ ಮೋಹಿಪ ಮುಗುಳ್ನೊಲೆ ಮುದ್ದಿನಮಾತುಮಿಂಚನು|
ಚ್ಚಳಿಸುವ ಚೆಲ್ವೆನೋಟ ಮಳಿಕುಂತಳ ಮುಜ್ಜ್ವಳಕಾಯ ಕಾಂತಿಮಂ ||
ಜುಳ ಮಧುರಾಧರಂ ಮಿಸುಪ ನುಣ್ಗದಪುಣ್ಮುವ ಬಾಸೆ ಬೇಟಮುಂ |
ಬಳೆಯಿಸಿ ನೋಳ್ಪರೊಳ್ಮೆರೆವ ಮುಗ್ಧೆಯ ನೀಕ್ಷಿಸಿದಂ ನರೇಶ್ವರಂ || ೯೮

ವಚನ|| ಆಗಳ್ವಿಟನಿಂತೆಂದಂ—

ವೃ|| ನೋಡಿದೊಡಾಗಳಂತೆ ತಲೆವಾಗುವ ನೋಡದೊಡೊಲ್ದು ನೋಳ್ಪಮಾ
ತಾಡಿಸೆ ಸುಮ್ಮನಿರ್ಪನುಡಿಗುಂದಿರೆ ಮೆಲ್ಲನೆ ಸೊಲ್ವಿಪಿಚ್ಛೆಯಿಂ ||
ಕೂಡಲೊಡಚ್ಚರ್ ಮೈದೆಗೆವಗಲ್ದಿರಲೊಯ್ಯನೆ ಸಾರ್ವರ್ ಮುಗ್ಧೆಯೇಂ |
ಮಾಡಳೆ ಮಚ್ಚಿದೋಪನ ಮನಕ್ಕೆ ಮನೋಜಮಹೋತ್ಸವಂಗಳಂ || ೯೯

ವಚನ|| ಎಂಬನುಡಿಗೇಳ್ದಿವಂ ತನ್ನನುಭವಮುಂ ಪ್ರಕಟಿಸಿದಪನೆಂದು ನಸುನಗುತ್ತಲ್ಲಿಂ ತಳರುತ್ತಿರೆ ಮತ್ತೊಂದೆಡೆಯೊಳೊರ್ವಮುಗ್ಧೆಯೊಳಗೊಳಗೆ ಬಳೆದಳವಿಗಳಿದವಿರಹಾನಳನಿಂ ದಳವಳಿದು ಕಳವಳಿಸಿ ಕಳೆಗುಂದಿ ದಂದಮುಂ ನೆವಮಿಟ್ಟುಮರಸಿ ಧೈರ್ಯಂಗುಂದದಿರೆ ಕೆಳದಿ ದಿಳಿದಿಂತೆಂದಳ್—

ವೃ|| ಬೆಳಗೆರ್ಂಪಂ ತಳೆದಿರ್ದ ಜೆಂದುಟಿದಳಿನ್ನಿರ್ಸ್ವಾರವಾದತ್ತು ಮೈ |
ಗೆಳೆ ಕಂಪಂ ಪಡೆಯಲ್ಕೆಬಂದು ಪೆರಪಿಂಗುತ್ತಿರ್ಪುದೀನಿನ್ನ ಸು ||
ಯ್ಗಳೆ ತಾಗುತ್ತಿರೆ ಕೈಯೊಳಾಂತಕಮಳಂ ಕಂದಿತ್ತಿದೇಂ ಕಾಂತೆ ನಿ |
ನ್ನಳವಂ ಪೇಳೆನೆ ನೀಳ್ದಕಣ್ಮಲಗಳಿಂ ಬಾಷ್ಪಾಂಬುವಂ ತುಂಬಿದಳ್ ||೧೦೦

ವಚನ|| ಅಂತು ಕಣ್ಣೀರ್ಗಳಂ ತುಂಬಿ ತನ್ನೊಳಗನರಿದಾಪ್ರಿಯವಯಸ್ಯೆಯೊಳ್ಮರಸಲಾಗದೆಂದಿಂತೆಂದಳ್—

ವೃ|| ಎನಗಿನ್ನಾಹಿರ್ತೆಯಸ್ಸರೋಜಮುಖಿ ಕೇಳ್ನಿನ್ನಿಂದೆ ನೀಂ ಪೋಗಿ ಕಾಂ|
ತನೊಳೋರಂತಿನಿವಾತನಾಡಿ ಮುನಿಸಂ ಬೇಕ್ಕೈರ್ದು ನೇಹಂ ಮನ ||
ಕ್ಕನುವಪ್ಪಂತಿರೆ ಮಾಡಿ ತಳ್ವದೊಡಗೊಂಡೈತರ್ಪುದೆಂದಂದು ಕಾ |
ಮಿನಿ ಚೆನ್ನೈದಿಲಮಾಲೆಗೂಡಿ ಮಣಿಹಾರಂಗೊಟ್ಟು ತಳ್ತಪ್ಪಿದಳ್ || ೧೦೧

ವಚನ|| ಅಲ್ಲಿಂ ಬಳಿಯಿನವಳ್ನಿಜಸಖಿ ಸಖನಿದ್ದೆರ್ಡೆಗೆಬಂದು—

ಕಂ|| ಮುಗ್ಧೆ ಭವದ್ವಿರಹದೊಳಿವಿ |
ದಗ್ಧೆಯೆ ತಾನಾದಳಿಂದು ನೀಂ ನೆರೆದೊಡೆ ಕೇ ||
ಳ್ಸ್ನಿಗ್ಧತೆಯೊಳ್ನೆ ವಿದಗ್ಧೆಯೆ |
ಮುಗ್ಧೆಯೆ ಪೇಳಿಕ್ಕಿದೇನಚ್ಚರಿಯೋ || ೧೦೨

ವೃ|| ಇದುಚಿತ್ರಂನಿನ್ನಶೈತ್ಯಾಸ್ಪದಹೃದಯದೊಳೊರ್ಮ್ಮೆರ್ವ್ಮೆತಾನಿರ್ದುಬೆಂ
ದದೆ ಕಂದಿರ್ದಳ್ಭವದ್ವಲ್ಲಭೆಯವಳ ವಿಯೋಗಾಗ್ನಿಸಂತಪ್ತಚಿತ್ತಾ || [ದಂ
ಗ್ರದೊಳಿದ್ದೂರ್ಂನೀನಜಸ್ರಂ ಕೊರಗಿದುದಿನಿತಿಲ್ಲಂಗಜಂ ಪಕ್ಷಪಾತಾ |
ಭ್ಯುದಯಕ್ಕಿಂಬಾದನೆಂಬಳಪೊಸನುಡಿ ಗೇಳ್ದೈದಿದಂ ಕಾಂತನಾಗಳ್ ||೧೦೩

ವಚನ|| ಅನಂತರಂ—

ವೃ|| ಬರೆತೆಗೆದಪ್ಪಿ ಬಾಯ್ದೆರೆಯನೊಯ್ಯನೆ ಚುಂಬಿಸಿ ಮುದ್ದುಗೈದು ಮೋ |
ಹರಸಮನಂತರಂಗದೊಳಮರ್ಚ್ಚಿ ನಿಮಿರ್ಚ್ಚಿ ನಖಕ್ಷತಂಗಳಂ ||
ಗುರುಕುಚದಲ್ಲಿ ಸತ್ಕಳೆಗಳುಣ್ಮುವ ತಾಣಮನಂಟಿ ಸಾದ್ದರ್ ಸಾ |
ದರಮುಚಿತೋಕ್ತಿಯಂ ನುಡಿದು ಪೊಂಪುಳಿಯಿಂ ಪೊದಿಸುತ್ತೆ ನಲ್ಲಳಾ ||೧೦೪

ನುಡಿನುಡಿಗೊರ್ಮೆಮುದ್ದಿಸಿ ಮುಖಾಂಬುಜಮುಂ ನಡೆನೋಡಿ ಚುಂಬಿಸು
ತ್ತೊಡನೊಡನಪ್ಪಿ ನುಣ್ಗುರುಳನೊಯ್ಯನೆ ತಿದ್ದಿರ್ಪೊದಳ್ದಲಜ್ಜೆ ಬೇ ||
ರ್ಪಡೆ ಪಡೆದಲ್ಲಿ ಕಾತರಮುಸಂದವಳೊಳ್ಕಳೆವೆತ್ತು ಕಾಣ್ಕೆಯಿಂ |
ದಡಿಗಡಿಗುರ್ವೆಮನ್ಮಥರಸಂ ನೆರೆದಂ ಮನದನ್ನನೊಲ್ಮೆಯಿಂ || ೧೦೫

ವಚನ|| ಇಂತು ನೆರೆದನಂತರಂ ರತಾಂತಶ್ರಾಂತಿಯಂ ತೀರ್ಚಲೆಂದು ನೆಲೆವಾಡದೊಳ್ನಿಂದೆಳೆಗಾಳಿಗೆರ್ದೆ ಗೊಟ್ಟು ನಿಂದಮುಗ್ಧೆಯರಂ ನಾಗರಿಕನರಸಂಗೆ ತೋರುತ್ತುಮಿರೆ ಮುಂದೊಂದೆಡೆಯೊಳೊರ್ವಳೆಳೆವರೆಯದ ನಳಿನಾಕ್ಷಿ—

ವೃ|| ಕನಕ ಸರೋಜ ಕೋರಕ ಸಮಸ್ತನಮಂಡಳಮಧ್ಯದಲ್ಲಿ ಮಾ |
ನಿನಿ ಮನದನ್ನನಿತ್ತ ನಖರೇಖೆಯ ನೊಯ್ಯನೆ ನೋಡುವಾಗಳಾ ||
ತನೆ ಬರುತಲ್ಲಿ ಬಿಂಬಿಸೆ ನಿರೀಕ್ಷಿಸಿ ಬಿಂಬಮನಪ್ಪಿಕೊಂಡು ಜುಂ |
ಮನೆ ಪುಳಕಂಗಳೇಳೆ ರತಿಗೆಯ್ಯಲೊಡರ್ಚುವಳೇಂ ಪ್ರಮುಗ್ಧೆಯೋ || ೧೦೬

ವಚನ|| ಅವಳನರಸಂಗೆ ಕರಸಂಜ್ಞೆಯಿಂನಾಗರಿಕಂ ತೋರುತ್ತುಮಿರೆಯಿರೆ ಪೆರತೊಂದೆಡೆಯೊಳೊರ್ವಿಚ್ಚೆಗಾತ್ತಿ್ರಮುಗಳ ಮೊಗಮಂ ಕಿಸುಗಣ್ಣೆ ನೋಡಿ ದಾಕ್ಷಿಣ್ಯಮ ನುಳಿದಿಂತೆಂದಳ್

ವೃ|| ಮೊಗಮಂ ನೋಳ್ಪುದುಮಾಗಳಂತೆ ಕಳೆವಾಗುತ್ತಿರ್ಪ್ಪ ಸಂಪ್ರೀತಿಯಿಂ|
ಮಿಗೆ ಮಾತಾಡಿಸೆ ಸುಮ್ಮನಿರ್ಪ್ಪ ನಗಿಸಲ್ಕೆಂದಲ್ಲಿ ಸಾತ್ತರ್ಂದು ಮೆ ||
ಲ್ಲನೆಗವಾತಂ ಬಿಡದಾಡೆ ನೋಡೆ ಕುಚಭಾರಸ್ರಸ್ತ ಚೇಲಾಂಚಲಂ |
ದೆಗೆಯೆಲ್ಕೋಪಿಪೆ ಕೂರ್ಪ್ಪರೇ ಮರವಿಟನ್ನಿರ್ನ್ನಾಟವಂ ಕಂಡವರ್ || ೧೦೭

ವಚನ|| ಮತ್ತಮದಲ್ಲದಿತ್ತಲೊಂದುಮಣಿಮಂದಿ[illegible]ದೊಳ್ಮಾಣಿಯದೆ ನಲ್ಲನೊಳ್ನೆರೆದು ಮಾಗೆಳ್ಪರಮುಟ್ಟುಬರ್ಪ್ಪುದು ಮರಿದಿರ್ದ್ದಬರ್ದ್ದೆ ಬಳ[illegible]ತೆಂದಳ್—

ವೃ|| ಸೂಳೆತೆನಕ್ಕಿದೇಂ ಸೊಗಸೆ ಲಜ್ಜೆ ನಿಜಾಲಯಕೈದಿ ದೋಪರೊ |
ಳ್ಮೇಳಕೆ ಮೆಯ್ಯನೀಯದೆ ಕರಾಗ್ರದೆ ಪೊಯ್ಯದೆ ತಳ್ಕೆ ಗೈಯದು ||
ರ್ಬೇಳದೆ ತಳ್ತು ಸೀಳದೆ ನಖಾಗ್ರದೆ ತಾಳದೆ ಚುಂಬನಂಗಳಂ |
ಪೇಳದೆ ಮಾರಮಂತ್ರ ಮನಿದೇಂ ರತಿವಿದ್ಯೆಗೆ ಮುಯ್ಯನಾಂಪುದೇ || ೧೦೮

ವಚನ|| ಮತ್ತ ಮೊರ್ವಳ್ವಿದಗ್ಧೆಮುಗಳ್ಗೆ ಬುದ್ಧಿವೇಳ್ದಳದಂತೆಂದೊಡೆ—

ವೃ|| ಗರ್ವಂಗುಂದದಿರಿಂದುವಕ್ತ್ರೆ ಘನಗರ್ವಂ ದಾಳದಪ್ರೀತಿವ |
ಟ್ಟೊರ್ವ್ವಂಗೆಂ ಮನಮಿಕ್ಕದಿರ್ಸೊವಡ ನೆಂದುಂ ಮಾಡದಿಕ್ರ್ಕೋಟದೊಳ್ ||
ಪರ್ವ್ವಿದ್ದಗ್ಗಳ ದಾಸೆಯಂ ಬಳಸದಿಕ್ರ್ಕೋಟ್ಟಲ್ಲ ದೊಲ್ದಪ್ಪದಿ |
ಸ್ಸರ್ವತ್ರಾತಿಶಯಂ ತ್ಯಜೇದೆನಿಪುದಂ ನೀಂ ಮಿರಾದಿವರ್ಮ್ಮನಿನೀ || ೧೦೯

ವೃ|| ನೋಡಿದೊಡಿನ್ನು ಮೊರ್ಮ್ಮನೆಡೆನೋಡಳೆಯೆಂದನೆ ನೋಡುಸಾದ್ದ್ರಮಾ
ತಾಡಿದೊಡಿನ್ನು ಮೊರ್ಮ್ಮ ನುಡಿಯಳ್ಗಡಯೆಂದನೆ ಮಾತನಾಡು ಜಾ ||
ಣ್ಗೂಡಿ ವಿಳಾಸದಿಂ ಸುಳಿದೊಡಿನ್ನು ಮಿವಳ್ಸುಳಿದೆಯ್ದಳೇಯೆನು |
ತ್ತಾಡೆ ಭುಜಂಗರಲ್ಲಿ ಸುಳಿದಗ್ಗಳಬೇಟಮನುಂಟು ಮಾಡು ನೀಂ || ೧೧೦

ವಡನ|| ಮತ್ತಮೊರ್ವ್ವಳ್ತನ್ನ ತನೂಭವೆಯ ಸೌಕುಮಾರ್ಯ ಮಾಧುರ್ಯಂಗಳಂ ಪೊಗಳ್ದು ತನ್ನ ಕೆಳದಿಗಿಂತೆಂದಳ್—

ವೃ|| ಮುಡಿಕಡು ಬಿಣ್ಪೆದೆಂದು ಸೆಡೆವಳ್ಮುಡಿದಪ್ಪಳೆ ಪುಷ್ಪಮಾಲೆಯಂ |
ಜಡಿವ ಘನಸ್ತನಕ್ಕೆ ಮಣಿವಳ್ಮಣಿ ಹಾರಮನಾಂಪಳೇ ಕರಂ ||
ಪೊಡರ್ವ*ನಿತಂಬಭಾರಕಲಸುತ್ತಡಿ ಯಿಕ್ಕುವ ಕಾಂತೆ ಕಾಂಚಿಯಂ |
ತುಡುವಳೆ ಸಿಂಗರಂಬಡೆಯದೆನ್ನ ಪುಗಳ್ವಿಟರಂ ಮರಳ್ಚುವಳ್ || ೧೧೧

ಕಂ|| ಕೂಡದ ಕಡೆಗಣ್ಣೋಟದ |
ಕೂರದನಂ ಕೂರಿಸುವಳುರೋಜಂಗಳ ಬ ||
ಲ್ಭಾರದ ಬಗೆಯಂ ಕಾಣಿಸಿ |
ಬಾರದನಂ ಬರಿಪಳೆನ್ನ ಸುತೆ ಮನೆಗಾಗಳ್ || ೧೧೨

ವಡನ|| ಅದಲ್ಲದೆ ಪೆರತೊಂದೆಡೆಯೊಳೊರ್ವ್ವಳ್—

ಕಂ|| ಎಳೆಯಳೆ ಕಟಾಕ್ಷಪಾಶದಿ |
ನೆಳೆಯೆಳೆಯುವ ಮೃಗಮನಂದದೊಳ್ಯತಿಕಳೆವೋಲ್ ||
ಪೊಳೆಯಳೆ ಶೃಂಗಾರರಸದ |
ಪೊಳೆಯೆ [illegible]ವರಾರೊ ಪೊನ್ನನಿವಳ್ಗತಿಧನಿಕರ್ || ೧೧೩

ಪಿಡಿನಡೆ ಪಿಡಿನಡು ಪೊಸಕೈ |
ಪಿಡಿವೊಗವುುಡುಪತಿಯ ಕದಿರನಾಳ್ಪಲರ್ಗಣ್ಕಿಂ ||
ಪಿಡಿದಧರದಳಂ ಕಡುವಿ |
ಣ್ಪಿಡಿಕಿರಿದನಿತಂಬಮೆನ್ನ ತನುಭವೆಗೆಸೆಗುಂ || ೧೧೪

ವೃ|| ನೋಡದೆ ಪೋದೊಡೊಂದರಿಯೆನೆನ್ನ ತನೂಜೆಯನೊಮ್ಮೆ ಕೂರ್ಮೆಯಿಂ
ನೋಡಿದೊಡಾಗಳಂಗಜಮಹಾಶಿಖಿ ಮೂಡದೆ ಬಲ್ಪು ಬಾಡದ ||
ಳ್ಕಾಡದೆ ಚಿತ್ತಮೋಡದೆ ಮದಂ ಪಿಕಿ ಕೋಡದೆ ಕೂಗಿ ಮೂರ್ಛೆಯಂ |
ಮಾಡದೆಕಾಯ್ಪುಗೂಡದೆ ಸುಧಾರುಚಿ ಕಾಡದೆ ಕಂತು ಮಾಣ್ಗುಮೇ||೧೧೫

ವಡನ|| ಎಂಬನೇಕ ವಿಧವಿದಗ್ಧಾಲಾಪಂಗಳಂ ಕೇಳುತ್ತುಂ ಬರುತ್ತಿರೆ ಮುಂದೊಂದು ಮಣಿಮಯದ್ವಾರದೊಳಂದಂಬಡೆದು ನಿಂದಸುಂದರಿಯ ಮುಂಗಯ್ಯೊಳ್ಸಿಂಗರವನೆ ಕುಳ್ಳಿರ್ದು-

ವೃ|| ಜಡೆಯ ಬೆಡಂಗಿ ನಣ್ಣೊಸಲನಾಯಕೆ ಚೆಂದುಟಿಯಂದಗಾತ್ರಿ ಮೆ |
ಲ್ನುಡಿಯ ಮೃಗಾಕ್ಷಿ ತೆಳ್ಗದಪಿನಂಗನೆ ಬಲ್ಮೊಲೆಯಬ್ಜಗಂಧಿ ನು ||
ಣ್ಗೊಡೆಯುಲತಾಂಗಿ ಮೆಲ್ಲಡಿಯ ಮುಗ್ಧೆ ನಿತಂಬದನೀರೆ ನಿನ್ನೊಳೋ |
ತೊಡವೆದಿರ್ಪ್ಪನಾವನವನಂಗಜ ಪಟ್ಟಮನಾಳ್ದನಾಗನೇ || ೧೧೬

ವಚನ|| ಎಂದು ಸರಸವಚನದಿಂ ಬಣ್ಣಿಪರಗಿಳಿಗೆ ನರುದಂಬುಲಗುಟುಂಕು ಗುಡುವವಳ ಬಾಯ್ದೆರೆಯುಂ ಕಂಡೆನಗಂ ಬಾಯೂರೆತಪುದೆಂಬವಿದೂಷಕನ ನುಡಿಗೆ ಮುಗುಳ್ನಗೆನಗುತ್ತರಸನಿರ್ಪನಿತರೊಳೊರ್ವ ತುಂಬುಜಾವನದ ಬಿಂಬಾಧರೆ ನಿಜವಿರಹವೀತಿಹೋತ್ರವಿಧುರಿತವೀಥಿಯೊಳ್ಪುರ್ಬದಂ ಕಂಡನ್ಯಭಂಗಿಯುಂ ತಳೆದವಳ ಮನದನ್ನಂ ದನಿವಳಿದಪ್ಪಿ ನುಡಿಯಿಸುವಲ್ಲಿ—

ವೃ|| ಏನೆಲೆ ಬಾಲೆ ಯೇಕೆಲೆ ಭುಜಂಗ ಇದೆಲ್ಲಿಗೆ ಪೋಪೆ ಪರ್ಬಿದು |
ದ್ಯಾನಕದೇಕೆ ನೀಮ್ಮುರ್ಗಳುಗಲೀಪೊಸಜೊನ್ನದೊಳುಂಟೆ ಉಂಟು ಕಾ ||
ಮಾಸಲವಗ್ಧಯೇಂ ನುಡಿಯಲೇನೊಡವರ್ಪನೆ ಬೇಡವೊರ್ವಳೇ |
ನೀನೆಲೆಯಾದೊಡೇನಗಿವೆ ಯಿಲ್ಲೆನೆ ಕೈವಿಡಿದಪ್ಪಿದಂ ವಿಟಂ || ೧೧೭

ಕಂ|| ಕಂಡಿನಿಯನೆಂದುತಿಳಿದಾ |
ಖಂಡಲಸಂಪದಮೆ ಸಾರ್ದವೋಲ್ಸಂಭ್ರಮದಿಂ ||
ಪಿಂಡೇಳ್ವಪುಳಕದೊಡನೊಡ |
ಗೊಂಡೊಯ್ವುತಾತ್ಮಗೃಹದೊಳವನೊಡವೆರೆದಳ್ || ೧೧೮

ವಚನ|| ಮತ್ತೊಂದು ಚಂದನರಸಧವಳಿತ ಕೇಳೀನಿಳಯಮಧ್ಯ ಮಂಡಿತ ಮಣಿಮಯ ಮಂಚಾಗ್ರದ ಮರಿಯುಂಚೆದುಪ್ಪುಳ ಮೇಲೊಂದಿದ ತಳ್ಪದೊಳೊರ್ವ ಬೇಟಗಾರ್ತಿ ತೋಟಗಾರ್ತಿಯಂತೆ—

ವೃ|| ಮುಗುಳಂಬಂ ಗೆಣೆಯಾದನಂ ಬರಿಸಿ [illegible]ಹಾ ಲಸತ್ಕಲ್ಪವ |
ಲ್ಲಿಗಡರ್ಪಂ ಕುಡುವಂತೆ ಕೊಟ್ಟು ತನುವಂ ನೀರ್ವೊಯ್ವವೋಲ್ಘರ್ಮವಾ ||
ರಿಗಳಿಂ ತೋಯ್ದದರಲ್ಲಿ ಚೆಂದಳಿರ್ಗಳಂ ತಾನಾಗಿಪಂ ತೊತ್ತಿ ಕೂ |
ರುಗುರಿಂ ಪೂಗುಡಿ ಮೂಡಿಪಂತೆ ಮೊಲೆಯಂ ಕೈದೀವಿ ಕಣ್ಗೊಪ್ಪಿದಳ್ || ೧೧೯

ಕಂ|| ತನುರುಹ ಮಗೆವೊಯ್ದವೊಲಿರೆ |
ತನು ತಳ್ತಿರೆ ಲಜ್ಜೆಯೊಂದೆ ತನುತೆಯ ನೊಲ್ದಾಂ ||
ತನು ನಯಮನತನು ಸುಖದ ಸು |
ತನು ವಿಂತನುಭವಿಸುತಿರ್ದಳಿನಿಯ ನೊಳೊರ್ವಳ್ || ೧೨೦

ವೃ|| ನೊಸಲ ಲಲಾಮಮುಂ ಸ್ತನದ ಚಂದನಮುಂತೊಡೆದಂತೆ ಪೋಗೆರಂ |
ಜಿಸುವ ಲತಾಂಗಮುಂ ಜಘನಮುಂ ಪದವೆತ್ತಿರೆ ಕರ್ಣಪೂರಮುಂ ||
ಪೊಸಮುಡಿಪೂಗಳುಂ ಜಗುಳೆ ನುಣ್ದೊಡೆಯುಂ ನಡುವುಂ ಕಡಂಗಿ ಕಂ |
ಪಿಸೆ ಗಳನಾದಮುಂ ಶ್ವಸಿತಮುಂ ನೆಗಳುತ್ತಿರೆ ತಳ್ತು ಕೂಡಿದಳ್ || ೧೨೧

ವಚನ|| ಅದಲ್ಲದೆ ಬೇರೊಂದೆಡೆಯೊಳೊರ್ವಳ್ನೆರೆದು ಸೆದೆವಟ್ಟು ಚಿಮುರಾರಿ ಸಲ್ಕೆಂದು ಮುಂದಿರದ ಮುಂದಣ ಮತ್ತವಾರಣಮಂ ನೆಮ್ಮಿ ನಿಂದಿರ್ಪುದು ಮವಳಮೊಗದ ಕಳೆಯುಂ ಕಂಡೊರ್ವ ಸೊಬಗ ಬೊಜಗನೊತ್ತುಗುಡಲೊಡನೆ ಪಿಡಿದುದಂ ಕಂಡು ಪೊರ್ದಿ ತಿಳಿದಿಂತೆಂದಂ—

ವೃ|| ಎಲೆಕಿರುಸೊಳೆ ನೀಂ ನೆರೆದಸೇದೆಯ ನಾರಿಸದೊತ್ತೆಯಾಂತೆಯಿಾ |
ಕಲೆಗಳೆ ಸೂಚಿಕುಂ ಸುಖಮದೇಂದೊರಕೊಳ್ಳದೆ ನಿಸ್ಸೊಳೀಗಳೆಂ ||
ದುಲಿವವಿಟಂಗೆ ಮಾನ್ಸ್ರಡಿದ ಳೊಂದಳಿಪೀದೊರ್ಡೆಪೋಪುದೇ ನವಾ |
ಬ್ಜಲಲಿತಸೌರಭಂ ಬಳಿಕ ಮೊಂದಳಿ ಸಾದೊರ್ಡೆ ಸೌಖ್ಯಮಾಯದೇ || ೧೨೨

ವಚನ|| ಎಂಬ ಗಣಿಕೆಯ ಚಾಟುಬಣಿತಿಯಂ ಕೇಳ್ವರಸನೊಳ್ಪೀಠಮರ್ದಕ ನಿಂತೆಂದಂ--

ಕಂ|| ಸ್ಮರನೆರವಿಲ್ಲದೆ ತೋಳ |
ಲ್ಲಿರುತಿದೊರ್ಡ ಮಧಿಕವಿತ್ತ ಮಿತ್ರಪೆನೆಂದೆಂ ||
ಬರೊಳೊಡ ವೆರೆಪುದು ವೇಶ್ಯಾ |
ಚರಿತ ಮಿದಲ್ಲದೊಡದೆಂತು ಸಿರಿವಡೆದಪರೋ || ೧೨೩

ವಚನ|| ಎಂಬ ಮಾತಂ ಕೇಳ್ದು ನಿಜಮೆಂದಲ್ಲಿಂ ಮುಂದಣ್ಗೆ ಬಪ್ಪಾಗಳೊರ್ವಳ್ಕು ಸು
ಮ ಕೋಮಳೆ ತನ್ನ ಕೆಳದಿಗಿಂತೆಂದಳ್—

ಕಂ|| ಕುಡುವೊಡವೆಗಾಗಿ ಪೋಗೆಂ |
ದೊಡ ನೊಡನೆ ಮ್ಮಬ್ಬೆ ನೂಂಕುವ ಳ್ತನ್ನವೊಲೆಂ ||
ದಡದು[illegible]ಬಳೆದವೊಡೆ ಪೇ |
ರೊಡಲಿ[illegible]ಗ ನೊಳೆಂತು ನೆರೆವೆಂ ಕೆಳದೀ || ೧೨೪

ವಚನ|| ಅದಂ ಕೇಳ್ದು ವಿದೂಷಕಂ ಪರಿದು ಪೋಗಿನಿಂದು ನಿರೀಕ್ಷಿಸಿ ಕಯ್ಯಂ ನೀಡಿ
ನಿಮ್ಮಬ್ಬೆಯನೆ ನೆವಮಿಟ್ಟು ಕಳಿಪಲ್ವೇಳ್ಕುಮೆಂದು ನರೇಂದ್ರನ ಮೊಗಕ್ಕೆ ಮುಗುಳ್ನಗೆಯುಂ
ಸೂಸುತ್ತಿರೆ ಮತ್ತೊಂದು ನೆಲೆಮಾಡದೊಳ್ಮದನ್ನ ನಗೆಲೆ ಮರುಗುವ ಚಪಲಚಿತ್ತಗೆ ಸಖಿಯಿಂ
ತೆಂದಳ್—

ವೃ||ಬಂದೊಡೆ ನೋಡೆ ಬಾರದೊಡೆ ದೂದವಿಯಟ್ಟುವೆ ಬೇಡ ಕೋಪಮಿಂ |
ನ್ನೆಂದಡಿಗಾತನೊಲ್ದರಗೆ ಗರ್ವಿಪೆ ಸೈತಿರೆ ಸುಕರ್ಿ ಸುಯ್ವೆ ಮೈ ||
ಸಂದ ಮರ್ದಪ್ಪಲಾತುರಿಸೆ ಮೈಗುಡೆ ಮಾಣ್ದೊಡೆ ಕಾಮವಹ್ನಿಯಿಂ |
ಬೆಂದಪೆ ಪೋಗವೋಲ್ಜಡಿವೆ ಪೋದೊಡೆ ಸೈರಿಸೆ ನೀಂ ನಿದೇಂಸಖೀ || ೧೨೫

ವಚನ|| ಇವಳ್ಕಲಹಾಂತರಿತೆ ಯಪ್ಪಳೆಂದು ನಾಗರಿಕಂ ನುಡಿಯುತ್ತಿರೆ ಮತ್ತೊಂದು
ಪಜ್ಜಳಿಪ ಬಜ್ಜರದ ಸೆಜ್ಜೆವನೆಯ ಸಿರಿಮಂಚದ ಶಿರೀಷ ಮೃದುಳ ತಳ್ಪಸ್ಥಳದಲ್ಲಿ—

ವೃ||ಬಿರಿಮುಗುಳಾದ ಜಾದಿಯರಳಂ ಮುಡಿಯೊಳ್ಮುಡಿದಿಟ್ಟು ಮುತ್ತಿನಾ
ಭರಣಮ ನುಟ್ಟು ಚೀನಲಲಿತಾಂಬರಮಂ ತೊಡೆದಂಗದಲ್ಲಿ ಕ ||
ಸ್ತೂರಿಯನು ಲೇಪಮಂ ಗೃಹಮ ನಾಮಣಿ ಮಂಚಮ ನೊಯ್ಯನೊಲ್ದು ಸಿಂ |
ಗರಿಸಿ ನಿಜೇಶನಾಗಮನಮಂ ಮನದೊಳ್ಬಯಸುತ್ತೆ ಬಾಡಿದಳ್ || ೧೨೬

ವಚನ|| ಅವಳಂ ನಿರೀಕ್ಷಿಸುತ್ತಿವಳ್ವಾಸಕಸಜ್ಜಿಕೆಯೆಂದು ನುಡಿವ ಮಾತನಾಕರ್ಣಿಸುತ್ತುಂ ನರೇಶ್ವರ ನಿರ್ಪ್ಪವಸರದೊಳೊರ್ವ್ವಭುಜಂಗಂ ನಿಜಸಖಂಗಿಂತೆಂದಂ—

ವೃ|| ಮಾನವಿದೇಕೆ ಮಾನಿನಿ ಮನೋಭವನಾಣೆ ಬಿಡೆಂದೊಡಾಂಕರಂ
ಜಾನಿಸಿ ಬಾಷ್ಪವಾರಿಗರೆವಳ್ಮೊಗನೋಡಿದೊಡಂತೆ ನಾಣ್ಚುವಳ್ ||
ಪೀನಕುಚಾಂಚಲಂದೆಗೆಯೆ ಕೋಪಿಪಳಪ್ಪಿದೊಡೊಲ್ದು ನಕ್ಕಪ |
ಳ್ತಾನದರಿಂದೆ ಸಂದಕಿಲಕಿಂಚಿತಮಂಚಿತಮೆನ್ನ ನಲ್ಲಳಾ || ೧೨೭

ವಚನ|| ಎನೆ ಕೇಳ್ದವಂ ಮುಂ ಪೇಳ್ದನೊಡನೆ ತನ್ನಿನಿಯಳ ವೃತ್ತಾಂತಮಂ ಮಗುಳ್ದು ಪೇಳ್ದನದೆಂತೆಂದೊಡೆ—

ವೃ|| ಮುಳಿದೆನ್ನೊಳ್ಮನದನ್ನೆ ಳೊಯ್ಯನೊರಗಿರ್ದ್ದಳ್ನಿದ್ರೆಗೈದಂದದಿಂ |
ತಿಳಿದಾನೆಬ್ಬಿಸಲಲ್ಲಿ ತೋರಮುಡಿಯೊಳ್ಪೂವಾಲೆಯುಂ ಸೂಡಿ ಮಂ ||
ಜುಳಕಾಶ್ಮೀರವಿಲೇಪಮುಂ ಮೊಲೆಗೆ ಲೇಪಂಗೈವುದುಂ ಪೊರ್ದ್ದೆಪೊಂ |
ಪುಳಿವೋದಳ್ಪುಟಮೇಳ್ದು ಪೊಯ್ದುಳೊದೆದಳ್ಬಾಯ್ದಪ್ಪಿದಳ್ನಕ್ಕಪಳ್ || ೧೨೮

ವಚನ|| ಎಂಬವಮಾತುಗೇಳ್ದಿವಳುಂ ಕಿಲಕಿಂಚಿತೆಯಕ್ಕುಮೆಂದು ವಿಟಂ ನುಡಿಯುತ್ತಿರೆ ಕೇಳ್ದಲ್ಲಿಂ ಮೆಲ್ಲನಿಳಾಧಿಪನಡಿಯಿಡುತ್ತಿರೆ ಮುಂದೊಂದುಮಂದಿರದಲ್ಲಿ ಸಾಪರಾಧನಾಯಕಂ ತಿಳುಪುತ್ತಿರೆ ಖಂಡಿತೆಯುಖಂಡಿತೇರ್ಷ್ಯೆಯಿಂ[illegible]—

ವೃ|| ಬೇಡವಿದೇಕೆ ನಿರ್ನ್ನರಸೆ ನಾಡೆ ನಯೋಕ್ತಿಯನಾಡುತಿರ್ಪ್ಪೆ ನೀಂ |
ನೋಡಿದೊಡಿಂತುಟಪ್ಪರೊಳರೇ ಯೆಸಿಪಂತಿರ ನಿನ್ನಮೆಯ್ಯೊಳೀ ||
ಬಾಡದಬಾಸುಳೀಯಧರದೊಳ್ಗಲೆಯಿಾಕರಜಕ್ಷತಂಗಳೀ |
ಪಾಡಳಿದಂಗವೀಯಿರವಿವೆಲ್ಲವನೀಕ್ಷಿಸಿ ನಂಬಲಕ್ಕುಮೇ || ೧೨೯

ವಚನ|| ಎಂಬಳ ನುಡಿಗೇಳುತ್ತಿರ್ಪ್ಪಿನಂ ಪೆರತೊಂದು ಮಣಿಮಯನಿಳಯಾಂತರಾಳದಲ್ಲಿ—

ವೃ|| ಚುಂಬಿಸುತಿತ್ತ ತಂಬುಲವನಲ್ಲದೆ ಮೆಲ್ಲದ ನಲ್ಲಳಂಗಗಂ |
ಧಂ ಬಗೆಗೊಂಡ ದೂವಟಮನಲ್ಲದೆ ತಾಳದ ತತ್ಕಚಪ್ರಜಾ ||
ಲಂಬಿತಪುಷ್ಪಮಾಲೆಗಳ ನಲ್ಲದೆ ಸೂಡದ ತತ್ಕುಚಂಗಳೊ |
ಳ್ತುಂಬಿದಯಕ್ಷಕರ್ದಮಮನಲ್ಲದೆ ಪೂಸದ ಕಾಂತನೊಪ್ಪಿದಂ || ೧೩೦

ವಚನ|| ಮತ್ತಮವನ ಮನದನ್ನಳ್ಮನೆಗೆ ಬಂದನಿಜ ಸಖಿಗಾತನಂ ತೋರಿ—

ವೃ|| ನುಡಿಯೆಮಗೊಂದೆ ನೋಟಮೆಮಗೊಂದೆವಿಳಾಸಮದೊಂದೆಚೆಲ್ವನಿ
ರ್ಮ್ಮಡಿಸುವಸಾರಯೌವನಮುಮೊಂದೆ ಗುಣೋನ್ನತಿಯೊಂದೆ ಕೂರ್ಪ್ಪುಬೇ||
ರ್ಪ್ಪಡಿಸದ ಜೇಟಮೊಂದೆ ರತಿಯೊಂದೆ ಮನಸ್ಸ್ಥಿತಿಯೊಂದೆ ಸೌಖ್ಯಮುಂ |
ಪಡೆದಪೆವಾವಗಂ ಕೆಳದಿ ಕೇಳದರಿಂದೆಮಗಾಸ್ಪರ್ದ್ದೆಮಾನರೇ || ೧೩೧

ವ|| ಎಂದು ತಮ್ಮಿರ್ವ್ವರ ಸಮಾನುರಾಗಸೌಭಾಗ್ಯ ವಿಭ್ರಮಮಂ ಸಂಭ್ರಮಂ ಮಿಗೆ ಸಮುದ ಸರಸೋಕ್ತಿಗಳಿಂ ಬಣ್ಣಿಸುತಿರ್ಪ್ಪನ ಮಿವಳ್ಸ್ವಾಧೀನ ಪತಿಕೆಯಕ್ಕುಮೆಂದು ನುಡಿವ ನಾಗರಿಕನ ನುಡಿಯಂ ಬಗೆಗೊಂಡರಸನಲ್ಲಿಂ ಬರುತಿರ್ಪ್ಪಲ್ಲಿ ಮುಂದೊಂದು ಮಣಿಮಾಗಿಳೊಳೊರ್ವ್ವಸರಸಹೃದಯಂ ತರುಣಿಯನಗಲ್ದು ಮುಂದುಗೆಟ್ಟ ವಳಿರವಂ ನೆನೆನೆನೆದು ಸುಯ್ದು ಕೆಳೆಯನೊಡನಿಂತೆಂದಂ—

ವೃ|| ಪರಕಾಂತಾಕರಜಾತದಂತಹತಿಯಂ ತಾಳ್ದೃದಲಾನೆನ್ನ ಸಾಂ |
ದರಿಯಾನೋಡುವ ನೋಟಮಾಭ್ರುಕುಟಿಯಾ ನಿಂದಂದಮಾಕಂಪಿಪೊಂ ||
ದಿರವಾಬೆಚ್ಚನೆ ಪಾಯ್ವಸುಯ್ಗಳೊದವಾಕಣ್ಣೀರ್ಗಳಾಕೋಪನಿ |
ರ್ಭರವಾಕೆತ್ತುವಪಲ್ಲವಾಧರಮದೇಂ ಮಚ್ಚಿತ್ತದೊಳ್ನಿಂದುದೋ || ೧೩೨

ವ|| ಅದಲ್ಲದೆಯುಂ—

ಕಂ|| ಪಳಿವುದು ಕೆಂದಾವರೆಯಂ |
ಮುಳಿದೊಡೆ ತಿಳಿದೊಡೆ ಪೊದಳ್ದಪೊಂದಾವರೆಯಂ ||
ಕಳೆವೆತ್ತುನಕ್ಕೊಡೆನ್ನಿನಿ |
ಯಳತೊಳಗುವ ವದನಮಲರ್ದ*ಬೆಳ್ದಾವರೆಯಂ || ೧೩೩

ವ|| ಎಂದು ಪಳಯಿಸ[illegible] ನಿತ್ತಲ್ಮತ್ತೊಂದು ಮಣಿಭವನದಲ್ಲಿ—

ವೃ|| ಮನದನ್ನಳ್ಮನದನ್ನ[illegible]ಂದಗಲೆ ಚಿಂತಾಕ್ರಾಂತೆಯಾಗಿರ್ದ್ದ ಕಾಂ |
ಚನಮಂಚಾಗ್ರದೆ ಮಗ್ಗುಲಿಕ್ಕಿ ಮಗುಳ್ದಾ*ತಂ ಬಂದು ಕೂಡಿರ್ದ್ದನ ||
ಲ್ಗನಸಂ ಕಂಡಖಿಳಾಂಗಮುಂ ಪುಳಕಮಂ ತಾಳ್ದೊಪ್ಪಲೆಚ್ಚತ್ತು ಕಾಂ |
ತನ ರೂಪಂ ಬರೆದಿರ್ದ್ದ ಚಿತ್ರಪಟಮಂ ತಳ್ಕೈಪಳೇಂ ಮೋಹಮೋ || ೧೩೪

ವಚನ|| ಮತ್ತಮೊರ್ವ್ವಳ್ಮಚ್ಚುಗಾರ್ತಿ ಕಡುಕೊರ್ತ್ತುದಂ ಕಂಡು ಕಾಡುವಕಪಟ ವಿಟನಿರ್ದ್ದೆಡೆಗೆ ತಾನೇ ಬಂದು—

ವೃ|| ನಿನಗಾಂ ಕೂರ್ತ್ತುದೆ ಕುಂದೆ ನೋಡದೆ ಕರಂ ಮಾತಾಡದಾಳೀಜನಂ |
ಮನೆಗೇಳ್ತಂದೊಡೆ ಮಾತುಗೇಳದವರೊಳ್ನೀಂ ಪೇಳದೇನೊಂದನಿಂ ||
ದನಿಮಿತ್ತಂ ಮುನಿದಿರ್ಪ್ಪುದೇಸುಚಿತಮೋ ಪೇಳೆಂದು ಕಣ್ಣೀರ ಪೇ |
ರ್ಪ್ಪೊನಲಿಂ ನಂದಿಸಿದಳ್ಪ್ರಕೋಪಶಿಖಿಯಂ ಪಾಯ್ದಪ್ಪಿದಳ್ನಲ್ಲನಂ || ೧೩೫

ವ|| ಅಂತಪ್ಪಿ ನಿಜನಿಕೇತನಕ್ಕೊಡಗೊಂಡು ಪೋಗಿ ಪೊಸಸುಸಿಲ್ಗೆ ಮನಮಿತ್ತು ಮಣಿಮಂಚದೊಳಿರ್ವ್ವರುಂ ಕುಳ್ಳಿರ್ದ್ದ ಬಳ್ಳಿವರಿವ ನಿಡುನೇಹದಿಂದದರೆ ನೋಡಿ—

ವೃ|| ತೋಳ್ತೊಡೆವಕ್ಷಮುಂ ಜಘನಮುಂ ಮನಮುಂ ಮೊಗಮುಂ ಪರಸ್ಪರಂ
ತಳ್ತಿರೆ ಕಂಪನಂಬಡೆದ ಕೈದಳದಿಂ ಪೊಡೆದೀಳ್ದು ಸೀಳ್ದು ಮೇ ||

ಲೇಳ್ತರೆ ಸುಣ್ಗೊರಲ್ದನಿ ಸುಧಾಧರವುಂ ಸವಿದುಕ್ಕಿರ್ ಸೊಕ್ಕಿರ್ ಸೂ |
ಳ್ಗಳ್ತಡವಾಗದಂತೆ ನೆರೆದಸ್ಸುರತಾಬ್ಧಿಯೊಳಾಳುತೇಳ್ವವೋಲ್ || ೧೩೬

ವ|| ಇಂತಪ್ಪ ಮಧ್ಯಮನಾಯಿಕೆಯರ ವಿವಿಧವಿಳಾಸವುಂ ನಾಗರಿಕನರಿಪುತ್ತುಂ ಬರೆವರೆ ಭೂಲೋಕಮುಕರಪಕಾಕಂ ಮುಂದಣ್ಗೆ ನಡೆನಡೆಯೆ ಮತ್ತೊಂದೆಡೆಯೊಳೊರ್ವ್ವ ವಿದಗ್ಧೆ ವಿರಹತಾಪಮುಂ ಸೈರಿಸಲಾರದಾಳಿಯ ಮೊಗಮುಂ ನೋಡಿ—

ವೃ|| ಮದನಂ ತಾಂ ಮಧುಮತ್ತನೀಶಶಿಕರಂ ದೋಷಾಕರಂ ಚಂದನಂ |
ಮದಸರ್ಪಪ್ರಕರೋಪಸೇವಿ ಶಿಖಿಮಿತ್ರಂ ಮಾರುತಂ ತಾಪಮಿಾ ||
ವುದು ಯುಕ್ತಂ ಸುಧೆಗೊಂಬಹಂಸೆ ಗುಣಿಪದ್ಮಂ ಕ್ಷೀರಪೂರ್ಣಂ ಸರಂ |
ಸುದತೀ ಕೇಳ್ಸುಮನಃ ಪ್ರಿಯಂ ಮಧುಕರಂ ಪೇಳಕ್ಕಯ್ಯುವುದೇಂ ತಕ್ಕುದೇ ||

ವಚನ|| ಅದಲ್ಲದೆಯುಂ—

ವೃ|| ಕಳಿವೆನದೆಂತೊ ಕಾಮಿನಿ ದಿನಂಗಳ ತಿಂಗಳ ಪೆಂಗಳಂಗವುಂ |
ತಿಳಿಯದೆ ನಲ್ಲನೈದೆ ಒಗೆ ನಿಲ್ಲದು ಸಲ್ಲದಿ ದೊಲ್ಲ ದೇನುವಂ ||
ಮುಳಿದಿಸುವಂಗ ಜಾತನ ವಿಘಾತನ ಶಾತನ ವಾಸ್ತ್ರ ಪಾತದಿಂ |
ದಳಿದಪೆನಾತನಂ ಕರೆಯಲಾಗದೆ ಬೇಗದೆ ರಾಗದಿಂ ಸಖೀ || ೧೩೮

ವ|| ಎಂದುನುಡಿದ ನಿಜಸಖಿಯ ನೀರ್ವೇದೊ[illegible]ಂ ಕೇಳಲಾರದ ವಳಿನಿಯನಿರ್ದ್ದೆಡೆಗೆ ಪರಿತಂದು ವಿನಯದಿನಿಂತೆಂದಳ್—

ವೃ|| ಸಸಿಗೆ ಸಮಾನಮಾದು ದವಳಾಸ್ಯಮದುಂ ಕಡುವೆಳ್ಪ ತಳ್ತು ರಂ |
ಜಿಸಿ ಬಿಸಕಾಂಡಕಂಗಲತೆ ತಾಂ ಸಮದಾಕೃತಿವೆತ್ತುದಂತದುಂ ||
ಲಸದರುಣಾಬ್ಜ ಪತ್ರದೆ ತದಕ್ಷಿ ಸುಹೃತ್ತ್ವಮನಾಂತು ದಂತದುಂ |
ಕುಸುಮಕಳಂಬನಂಬು ಬಗೆಗುಂದಿಸಿದತ್ತದು ಮಬ್ಜಗಂಧಿಯಾ || ೧೩೯

ಅಸುಗೊಳಳೆಂದು ತಾಂ ಬೆಸಸಿಯುಂ ಸಸಿಯಂ ಸಸಿಯಂ ಸಮಂತು ರಂ |
ಜಿಸುವ ಬಸಂತನಂ ಸಮದನಂ ಮದನಂ ಮದನಂತಶೌರ್ಯಮುಂ ||
ಪಸರಿಪೆನೆಂದು ಗರ್ಜಿಸರಲಂ ಸರಲಂ ಸರಲಾಂಗುಲಿದ್ವಯುಂ |
ಮಿಸುಗಿರಲೆಚ್ಚು ಕೂಡೆ ತವಿಪಂ ತವೆಪಂ ತವೆ ಪಂಕಜಾಕ್ಷಿಯೊಳ್ || ೧೪೦

ವಚನ|| ಎಂದು ಚತುರೋಕ್ತಿ ಜಳಮನೆರೆದು ಮುಳಿಸಂ ಕಳೆದೆಗೆವಂತೆ ತೆಗೆದು ಬಗೆನೆಲದೊಳ್ಬೀಟಿವೆಂಬ ಸಸಿಯಂ ಜೀವ್ವರಿಯಿಸಿ ವಿನಯದಿಂ ದೊಡಗೊಂಡು ಬಂದು ನಿಧುವನನಿಕೇತನಮುಂ ಪುಗಿಸಲೊಡನೆ ವಸಂತರಿಾಜನಂ ಕಂಡ ವನಲಕ್ಷ್ಮಿಯಂತೆ ಸೊಂಪೇರಿ ಕಮುಳಕಾಮುಕನಂ ಕಂಡ ಕಮುಳಿನಿಯಂತೆ ಮೊಗಮುಳರ್ದಲರಂ ಕಂಡಳಿಯಂತೆ ಬಳಿಸಾರ್ದ್ದು ಮುಗಿಲಂ ಕಂಡಮುಯೂರಿಯಂತೆ ಮೆಯ್ಯುವ್ವಿ ಮಾವಂ ಸಾರ್ದ್ದಮಲ್ಲಿಗೆಯಂ ತಮುರ್ದಪ್ಪಿ ಸಸಿಗಳರಸ

ನ ಸರಸಕರಂ ಸೋಂಕಿ ದಸಸಿಗಲ್ಲ ಪುತ್ಥಳಿಯಂತೆ ಕರಗಿ ಬಿಂಬಫಳಮಂ ಕಂಡರಾಜಶುಕಿಯುಂತೆ ಬಿಂಬಾಧರಮಂ ಕರ್ದುಂಕಿ ಕಾತರಂ ಕೈಮಿಗೆ ಕಡುಸೊಬಗಿಂ ಕಾಂತನೊಡನೆ ಕಾಂಚನಮಂಚದ ಕಮಳದಳ ಧವಳಮೃದುಳತರ ವಿಪುಳ ಮರಾಳ ತೂಳಕಲ್ಪಿತಾನಲ್ಪ ತಲ್ಪದೊಳ್ಮೆಲ್ಪಿಂ ಕುಳ್ಳಿರ್ದ್ದು ಕಳಾವಿಳಾಸಂ ಬಡೆದು ಕಾಮಕೇಳಿ ಗುಜ್ಜುಗಿಸಿ ಸಜ್ಜುಗೈವಾಗಳ್—

ವೃ|| ಬೆಮರ್ದಂಗಂ ಪತ್ತಿದತ್ತೀರ ವಕೆಯುಸುಗಿ ನೀನೆಂದು ಪದ್ಮಾಸ್ಯೆತಾಂ ಪೇ
ಳೆ ಮಹೋತ್ಸಾಹಾನ್ವಿತಂ ವಲ್ಲಭನಿಡೆ ಕುಚಮಧ್ಯಕ್ಕೆ ಹಸ್ತಾಬ್ಜಮಂ ಮ ||
ತ್ತೆಮನೋಜ್ಞಾಂಗಂಪೊದಳ್ದುರ್ಬ್ಬಿದೊಡೊಡೆದುದುಜಾರಿತ್ತುಬಾಹಾಹಿತದ್ದೇ
ಹ ಮಹಾಶ್ರೀಖಂಡ ಶಾಖಾಗ್ರದೆಹೆರೆಗಳೆಯುತ್ತಿರ್ಪ್ಪುದೆಂಬಂದದಿಂದಂ ||

ಕೊರಲೊಳ್ತಳ್ತಿರೆ ಬಾಹುವಲ್ಲರಿ ಯುರೋಜದ್ವಂದ್ವದಿಂದೊತ್ತಿ ಪೇ |
ರುರಮಂ ಸಾರ್ದ್ದ್ರಮರ್ದಪ್ಪಿ ನೋಡಿ ಕಡೆಗಣ್ಣಿಂ ದಳ್ಕರಿಂ ಪಲ್ಲವಾ ||
ಧರಮಂ ಚುಂಬಿಸಿ ನೀವಿ ಜಾರೆ ಜಘನಾಭೋಗಂ ಪೊದಳ್ದುರ್ವ್ವೆ ಸೌಂ |
ದರಿ ನಾನಾಕಳೆವೆತ್ತು ಸೋಂಕಿ ನೆರೆದಳ್ಕಾದಲ್ಮೆಯಿಂ ಕಾಂತನೊಳ್ || ೧೪೨

ಕಂ|| ನೆರೆವೆರೆಯ[illegible]ಸುಳಿದು ಚೆಂದುಟಿ |
ವೆರೆವಿಡಿದ[illegible]ರ್ಂಟಿ ಪಟುಭುಜಂಗಂ ಶಂಖಂ ||
ಮೊರೆಯಿಟ್ಟಪುದೆನೆ ಮದನಂ |
ಗುರೆ ಮೆರೆದುದು ಗಳನಿನಾದಮದು ಕಳರವೆಯಾ || ೧೪೩

ವಚನ|| ಇಂತುಕಂತುಕೇಳಿ ಸುಖಾಸ್ವಾದನೋನ್ಮತ್ತಚಿತ್ತರೊಪ್ಪುತ್ತಿರೆ ಮತ್ತೊಂದು ಮುತ್ತಿನ ನೆಲೆವಾಡದೊಳವಳಯ ದೊಳಗಣ ತಳತಳಿಪ ಮನೋಜ್ಞಮಣಿಮಯಮಂಚಾಗ್ರದಲ್ಲಿ

ವೃ|| ಇಂದೆನಗೆನ್ನ ನಲ್ಲನೊಡಗೂಟಮದಪ್ಪುದೆ ಯೆಂದಗಲ್ದ ಪೂ |
ರ್ಣೇಂದು ನಿಭಾಸ್ಯೆ ಚಿಂತಿಸುವ ವೇಳೆಯೊಳೊಪ್ಪುವ ವಾಮ ಬಾಹು ವಿ ||
ಸ್ಪಂದಮನಾನೆ ಬಂದೊಡವನಾಗಳೆ ಭಾಪೆನುತೇಳ್ದು ರೋಮಹ |
ರ್ಷಂದಳೆದಪ್ಪಿದಳ್ಪತಿಯನಾ ಭುಜದಿಂದಮೆ ಪೂರ್ಣರಾಗದಿಂ || ೧೪೪

ಪುಳಕದ ಮೆಯ್ಯೊಳಪ್ಪುತೆ ಬೆಮರ್ತ ಘನಸ್ತನಮಂಡಳಂಗಳಂ |
ಕೆಳೆಗೊಳಿಸುತ್ತೆ ವಕ್ಷದೊಳೆ ಕಂಪಿಪಕೈದಳದಿಂದೆ ಪೊಯ್ದು ಪಾ ||
ಯ್ದೊಳಿವಸುಖಾಶ್ರುವಿಂ ನನೆದಕಣ್ಮಲರಿಂ ನಡೆನೋಡಿ ಮುಂಬದಂ |
ಗಳಿಯಿಸೆ ಕೂಡಿಗದ್ಗದದ ಕಂಠದೆ ಕೂಜಿತಮಂ ನೆಗಳ್ಚಿದಳ್ || ೧೪೫

ವ|| ಇಂತು ಸಮಾನುರಾಗದಿಂ ನೆರೆದಗಲದಿರ್ದ್ದಾತನಂ ನೋಡಿ ನಾಗರಿಕನಿಂತೆದಂ—

ಕಂ|| ಅಸಿಯೊಳುಸಿರೆಲರನಾಸ್ವಾ |
ದಿಸುತಧರಾಮೃತವನೀಂಟಿ ಭೋಗಿತ್ವಮನಾಂ ||
ತಸಮುಕುಚಕಲಶನಿಧಿಗಾ |
ದೆಸೆವಂಗೆ ಭುಜಂಗನಾಮಮೇಂ ಬಗೆವೃಗದೇ || ೧೪೬

ವಚನ|| ಎಂಬಮಾತಂ ಮನವೊಸೆದಾಕರ್ಣಿಸುತ್ತಿರೆ ಮತ್ತಮೊರ್ವ್ವಳ್ಮೆಚ್ಚುಗಾತ್ತಿ ಮನದನ್ನನ ಮಾತಾಗಿ ಕೇಳದಿಗಿಂತೆಂದಳ್—

ವೃ|| ಮೊಗದೊಳ್ನೋಳ್ಪನೆ ಮುಗ್ಧಭಾವಮುವನೈತಪ್ಪಂದದೊಳ್ನೋಳ್ಪನೇ |
ಮಿಗೆಸೌಜನ್ಯಕಳಾಪ್ರಕಾಶತೆಯಿಮಂ ನೋಳ್ಪಂದದೊಳ್ನೋಳ್ಪನೇ ||
ನೆಗಳ್ದ*ಕ್ಕಸ್ಸವಿವಾತನಾಡಿ ನೆರೆವಾಗಳ್ನೋಳ್ಪನೇ ಕಾಂತೆ ಕೇ |
ಳ್ಮಗುಳಂಬಂಗೆಣೆಯೀತನಿಕ್ಕೆನಗೆ ತೋಳೊಳ್ಜನ್ಮಜನ್ಮಂಗಳೊಳ್ || ೧೪೭

ವಚನ|| ಅಲ್ಲಿ ಮತ್ತಮೊರ್ವ್ವಳ್—

ವೃ|| ಕಡೆಗಣ್ಣಲ್ಲಮುನಿತ್ತೊಡಲ್ಲದೆಳಸಂ ಮೈಸಾರ್ದ್ದ ನಿಂದಲ್ಲದೊ |
ಳ್ನುಡಿಯಾಡಂ ನಿಜವಕ್ಷದೊಳ್ಗುರುಕುಚಂ ತಳ[illegible]ಾಲಿಂಗಿಸಂ ||
ತೊಡೆ ಕಂಪಂಬಡೆದಲ್ಲದೊಂದಿ ಬೆರಸಂ ಕಾ[illegible]ಡು ಕಯ್ಮಾರಿ ಮೆ |
ಲ್ಲುಡೆ ತಾನೇ ಸರಿದಲ್ಲದೊಲ್ದು ನೆರೆಯುಂ ಮತ್ಪ್ರಾಣಕಾಂತಂ ಸಖೀ ||೧೪೮

ವ|| ಮತ್ತಮೊರ್ವ್ವಳ್ಚೆಲ್ಲಗಾತಿ ದೂದವಿಯೊಡನೆ ನಗೆಮಿಸುಗೆ ಮೊಗಮಂ ನೋಡಿ—

ವೃ|| ಸುರಿಯೆ ಸುಖಾಶ್ರುವಳ್ವಿಳಿವಳೆಂದತಿದೈನ್ಯಮನಾಡಿ ಕಂಪಿಸಂ |
ನೆರೆಯೆ ಭಯಾರ್ತ್ತೆಗೆತ್ತಗಿದು ನೋಡಿ ಕರಾಗ್ರದೆ ಪೊಯ್ಯೆ ಕೋಪನಿ ||
ರ್ಭರಯುತೆಯೆಂದು ಬಾಡಿ ಸುರತಾಂತದೊಳಕ್ಷಿಗಳಂ ಮುಗುಳ್ಚಿ ಪ |
ಟ್ಟಿರೆ ಪರಮಾಯು ತೀವಿತಿವಳೆಂದಿರದೋಡಿದನೊರ್ವ್ವಸೂರಿಚಂ || ೧೪೯

ವಚನ|| ಎಂದುಸಿದ್ಧ್ವನಿಜಸಖಿಯ ಬಗೆಗೆ ನಗೆಯಂ ಪಡೆದಿರ್ದ್ದಳಿತ್ತಲ್ಮತ್ತೊರ್ವ್ವ ವಿದಗ್ಧಾಂಗನೆ ಪಚ್ಚಿದ ಬೆಳ್ದಿಂಗಳೊಳ್ನಿಜಗೃಹದ್ವಾರದ ಪೊಂಜಗಲಿಯೊಳ್ಬಳಸಿದಬೆಲೆವೆಣ್ಗಳನಡುವೆ ಗಾಡಿಯಿಂ ಕುಳ್ಳಿರ್ದ್ದಿಂತೆಂಳ್—

ವೃ|| ನಯಸಂಪನ್ನನತೀವಯೌವನಯುತಂ ರೂಪಾನ್ವಿತಂ ನರ್ಮಗೋ |
ಷ್ಠಿಯ ನಾಳ್ವಂ ಕಡುಸೀರ ನೂರ್ಜಿತಯಶಂ ಪಂಚಾಸ್ತ್ರಶಾಸ್ತ್ರಾರ್ಥನಿ ||
ಶ್ಚಯಚಿತ್ತಂ ಸುಭಗಂ ಪ್ರಸನ್ನನುಚಿತಜ್ಞಂ ಚಾಗಿ ಸಂಭೋಗಸಂ |
ಪ್ರಿಯನುತ್ಸಾಹಿಯೆನಿಪ್ಪನೊಳ್ನೆರೆವ ಪೆಣ್ಗಾಗ್ರರಂಭೆಯುಂ ಸಾಟಿಯೇ || ೧೫೦

ವೃ|| ಖಲನೋಳ್ಕಾತರನೊಳ್ಕಳಾರಹಿತನೊಳ್ಕಾಪಟ್ಯಮಂ ಮಾಳ್ಪದು |
ರ್ಬ್ಬಲಸೊಳ್ದುರ್ಮುಖಸೊಳ್ದುರುಕ್ತಿಪರನೊಳ್ದುರ್ಮಾರ್ಗದೊಳ್ಕೂರ್ಪನಾ ||
ಣೆಲಿಯೊಳ್ನಿಷ್ಠುರನೊಳ್ನಿತಾಂತಶಠನೊಳ್ನಿಸ್ನೇಹಮಂ ತೋರ್ಪ್ಪಸಂ |
ಚಲನೊಳ್ಸದ್ಗುಣ ಹೀನನೊಳ್ನೆರೆವ ಕೂಟಂ ನಂಜಿನೂಟಂ ಸಖೀ || ೧೫೧

ವಚನ|| ಅದಂ ಕೇಳುತಿರ್ಪ್ಪನಿತರೊಳಲ್ಲಿ ಪೆರತೊಂದು ತಾಣದೊಳ್ಕುಳ್ಳಿರ್ದ್ದರಿಚನಿರವಂ ನೋಡಿ ನೀನೀತನೋಳ್ಕೂರ್ಪ್ಪುದುಂಟೇ ಸಖಿಯೆಂದು ಬೆಸಗೊಂಡಾಳಿಯೊಡನೊರ್ವ್ವಳ್ಸುಭಗೆ—

ವೃ|| ಬರ್ಪ್ಪುದು ಮಾಗಳೆಳ್ದು ಪಿಡಿದಿಟ್ಟುದನುರ್ಚ್ಚುವನೊತ್ತಿ ಪಾಯ್ವನು |
ಳ್ಳೈರ್ಪ್ಪಮಿಗಲ್ಕಡಂಗಿ ಕಡುಕಾತರ ಮುಣ್ಮರೆ ಕಾಯಜೀವಮಂ ||
ಬೇರ್ಪ್ಪಡಿಪಂತೆ ಕೂಡುವನಿದೇಂ ಸಖಿ ಕೂಟಮೊ ಬೇಟದೋಟಮೋ |
ಕೂರ್ಪ್ಪುದನೀತನಂ ಕುಡುವಪೊಂಗಳನಾನಿರದೊಟ್ಟೆ ಸುಟ್ಟಪೆಂ || ೧೫೨

ವಚನ|| ಎಂಬ ನುಡಿಗೇಳ್ದು ವನಿಪಂಗೆ ವಿಟನಿಂತೆಂದಂ—

ವೃ|| ನಗೆಯರಿದೈದಿ ನಾಣರಿದು ಮುದ್ದಿಸಿ ಪೊಂಪುಳಿವೆತ್ತ ಮೆಯ್ಯಪೊ |
ರ್ದ್ದುಗೆಯರಿದಂಟಿ ಸೋಲವರಿದೀಕ್ಷಿಸಿ ಕಾತರಮುಣ್ಮೆ ಮುಂಚುವಾ ||
ಬಗೆಯರಿದಪ್ಪಿ ಭಾವವರಿದ[illegible]ಡಗೂಡಿ ನಿತಾಂತ ಸೌಖ್ಯಮಂ |
ನೆಗಳದಗಾಂಪನೇನೊಲಿಸಲ[illegible]ನೆಸೂಳೆಯರಂ ಧರಿತ್ರಿಯೊಳ್ || ೧೫೩

ವಚನ|| ಎಂದರಸನಚಿತ್ತಕ್ಕೆ ಸರಿವೋದನಲ್ಲದೆ ಮತ್ತೊಂದು ಮರಕತ ರತ್ನದಮೊಗಸಾಲೆಯೊಳ್ಕುಳ್ಳಿರ್ದ್ದಸೂಳೆ ವಾತಾಗಿವಿಟಂ ವಿಟನೊಡನೆ ನುಡಿದನದೆಂತೆನೆ—

ವೃ|| ಎಳಸುತ್ತಪ್ಪಿದೊಡಕ್ಷಿಯೊಳ್ಸಖಜಳಂ ಮೆಯ್ದೋರದಾಸ್ಯಾಬ್ಜದೊ |
ಳ್ಕಳೆ ಕೈಮೀರದೆ ನೀವಿ ಜಾರದೆ ಸುಸಿಲ್ಗೈವಲ್ಲಿ ನಾಣ್ಗೊಂಡೊಡು ||
ತ್ಪುಳಕಂ ಮೂಡದೆ ದೈನ್ಯಮಾಡದೆ ನಿತಂಬಂ ಮುಂಬದಂ ಗೂಡದಿ |
ರ್ಪ್ಪಳ ಕೂಟಂ ಬಿಡದೇಳ ರಾಟಮದನಾವಂ ನಚ್ಚುವಂ ಮೆಚ್ಚುವಂ || ೧೫೪

ವ|| ಮತ್ತಮೊರ್ವ್ವನಿದಿರೊಳ್ಕೈತರ್ಪ್ಪ ಟಕ್ಕುಗಾರ್ತಿಯಂ ಕರಸಂಜ್ಞೆಯಿಂ ಕೆಳೆಯಂಗೆ ತೋರಿ ಮೆಲ್ಲನಿಂತೆಂದಂ—

ವೃ|| ಮಿಸುಗುವಬಟ್ಟಬಲ್ಮೊಲೆಯನೀವಧು ಮೇಲುದನಿಕ್ಕುವಂತೆ ಕಾ |
ಣಿಸಿ ಕಚಗಂಧಕಾರ್ದ್ದರಗುವಾರಡಿಯಂ ನಡೆ ನೋಡುವಂತೆ ಕಾ ||
ಣಿಸಿ ಸವಿನೋಟಮಂ ಜಗುಳ್ವಕಾಂಚಿಯ ನೆತ್ತುವಪಾಂಗಿ ನಿಂದೆಕಾ |
ಣಿಸಿ ಸುಳಿನಾಭಿಯಂ ಬೊಜಗರಂಗದೆ ಕಾಣಿಪಳಂಗಜಾಗ್ನಿಯಂ || ೧೫೫

ವಚನ|| ಅಂತುಮಲ್ಲದೆಯುಂ—

ವೃ|| ಮೊದಲೊಳ್ನೋಡದೆಬೇಟಮುಂ ಪಡೆದು ಕೂರ್ತೆಯ್ತಂದ ಕಾಂತರ್ಗ್ಗೆ ಸಂ|
ಪದವಂ ಕಾಣಿಸಿ ಕೊಟ್ಟುದೊಲ್ಲದೆ ಕುಲಸ್ತ್ರೀಯಂತೆ ಕೂರ್ತರ್ಪ್ಪಿ ಸಂ ||
ಮದವಂಪುಟ್ಟಿಸಿ ಮತ್ತೆಮತ್ತೆ ಬಗೆಯೆಂತಿರ್ದ್ದಂತೆ ಕೂಡುತ್ತೆ ಸೋ |
ಲ್ತುದ ನೊಲ್ಪೀಕ್ಷಿಸಿ ಚಿಕ್ಕದೊಂದುಮುಳಿಸಿಂ ಸರ್ವಸ್ವಮಂ ಕೊಂಡಪಳ್ ||

ವಚನ|| ಎನಲಾನುಮಿವಳ ಬಗೆಯಂ ಮುಂಬಲ್ಲೆನೆಂದು ಕೇಳ್ದವಂ ಮಗುಳುತ್ತರಂಗುಡುತಿರ್ದ್ದನಲ್ಲಿ ಮತ್ತೊಂದು ತಾಣದೊಳೊರ್ವ್ವನೊರ್ವ್ವಳೊಳ್ಸರ್ವವಲ್ಲಭೆಯಾದ ನಿನ್ನೊಲ್ಮೆಯನೆಂತುನಂಬಲಕ್ಕುಮೆಂದು ನುಡಿಯಲೊಡನವಳಿಂತೆಂದಳ್—

ವೃ|| ಸೂಳೆಯಗಾ*ರ್ವನಾದೊಡೊಸೆದೊತ್ತೆಯನಿತ್ತನತೋಳೊಳಿರ್ದ್ದುವೆ |
ಯ್ಮೆಳಕೆ ಮೆಯ್ಯನೀವುದುಚಿತಂ ಮನಮಿತ್ತೊಡೆಸಾಲದೇಮನಂ ||
ಮೇಳಿಸಿನಿಂದುದರ್ಕ್ಕೆ ಕುರುಪಲ್ತೆಸದಾದರಮುಂ ಸಿರಾಶೆಯುಂ |
ಕೇಳಿಗೆ ಮುಂಚುವಿಂದ್ರಿಯಮುಮಂಗದೊಳುರ್ಬ್ಬುವ ಸಾತ್ವಿಕಂಗಳುಂ ||

ವಚನ|| ಇದುಮಂ ನಂಬದೊಡೆ ಕುರುಲಂ ಬೆರಲಂ ಬೇಡಿತ್ತಪೆಂತೊದಳಿಲ್ಲೆಂದು ನುಡಿದ ನಲ್ಮೆಗಾರ್ತಿಯ ನುಣ್ಮಾತಂ ಕೇಳ್ದು ಸಂತಸಂದಾಳ್ದು—

ವೃ| ಬೆರಲಂಕೊಟ್ಟೊಡೆಬೇಟಮೇಂಕುರುಳುಮಂಕೊಯ್ದಿತ್ತೊಡೇಂಕೂರ್ಮೆಕೇ
ಳರವಿಂದಾನನೆ ಮನ್ಮನಃಪ್ರಿಯಮುದಲ್ತೀದೇ[illegible]ನಲ್ಮೆಯುಂ ||
ಬರಿಯುತ್ತಿತ್ತೊಡಿಪೆಲ್ಲಮೇಂ ಪೊರಗೆ ಪೇರಂ ತತ್ತವಸ್ತುಂಕಮೀ |
ವರೆ ಶೀರ್ಷಂಗುಡೆ ಕಣ್ಗಳೇಂ ಪೊರಗೆ ಕೂರ್ಪ್ಪೊಂದಿರ್ದ್ದೊಡೊಂದಕ್ಷಯಂ ||

ವಚನ|| ಎಂದವಸ್ಸರಮುಪ್ರೇಮದಿಂ ನೆರೆದಿರ್ದ್ದರಿತ್ತಲೊರ್ವ್ವ ಬರ್ದ್ದಬಹುಧನಸಂಪನ್ನರಾದ ಚೆಲ್ವ ಬೋಜಗರೆಳವೆಣ್ಗಳಾಲಯಕ್ಕೆ ಪೋಪುದಂ ಕಂಡು ಸೈರಿಸಲಾರದ ಸೊಯೆಯಿಂದವರ್ಕ್ಕೆಳ್ವಂತೆ—

ವೃ|| ಹರಿಯಮದಿರ್ದ್ದೊಡೇಸೊ ನೆರೆವುಜ್ಜಗಮುಂಟೆ ವಿಳಾಸಮುಂಟೆ ಕಂ |
ಠರವಮದುಂಟೆ ಸತ್ಕರಣಮುಂಸೆ ಕಳಾಜ್ಞತೆಯುಂಟೆ ಕಾಲಮುಂ ||
ಪರಕಿಪುದುಂಟೆ ಸಲ್ನುಡಿಗಳುಂಟೆ ರತೇಚ್ಛೆಯನಂತೆ ಪೆರ್ಚ್ಚಿಪಾ |
ಪರಿಕರಮುಂಟೆ ಲಜ್ಜೆವೆರೆದೀಕೆಯುರೊಳ್ರತಿ ಲಜ್ಜೆಯಲ್ಲವೇ || ೧೫೯

ವ|| ಎಂಬನಿತರೋಳ್ವಿಟಂ ಕೇಳ್ದವಳಿದಿರ್ಗ್ಗೆವಂದು—

ವೃ|| ಎವೆಮುರೆಯಾದೊಡೊಂದಿನಿತು ಸೈರಿಸಲಾರದ ಕೂರ್ಮೆ ಪೇರ್ಮೆವೆ
ತ್ತವಿಭವಮುಂ ವಿಚಾರಿಸದ ಪೊರ್ದ್ದುಗೆ ವಂಚನೆಗೆಯ್ಯದಂಗವೊ ||
ಪ್ಪುವ ವಿವಿಧೋಪಚಾರವಚನಕ್ಕೆರ್ದೆಯಿಕ್ಕದ ಮಚ್ಚರ್ವಿತ್ತಮೀ |
ವವನಿವನಲ್ಲವೆಂಬಬಗೆ ಪೊರ್ದ್ದದನಲ್ಮೆ ವಿದಗ್ಧೆಗುಂಟೆ ಪೇಳ್ || ೧೬೦

ವ|| ಎಂದವಳಂ ನಾಣ್ಚಿಸಿದನದಲ್ಲದೆ ಮತ್ತಮೊಂದೆಡೆಯೊಳೊರ್ವ್ವಳ್ಮುದಲೆ ಮಾತಾಗಿ ನುಡಿಯೆ ಮುಳಿದ ಮುಗಳ ಮೊಗಮಂ ನೋಡಿ—

ವೃ|| ಪೋದೊಡೆ ಬಾರದೀಸೊಗಸು ಜೌವನಮೀಗಳೆ ವಿತ್ತಮುಳ್ಳರಾ |
ರಾದೊಡಮೇನೊ ಮೇಣ್ಬರಿಸಿ ಮೆಲ್ಲೆರ್ದೆಯಂ ಮೊದಲೊತ್ತೆಗೊಂಡು ಮ ||
ತ್ತಾದರಿಸುತ್ತೆ ಮನ್ಮಥಸುಖಾಬ್ಧಿಯೊಳಾಳಿಸಿ ತಂಗಿ ದೇಹಮಂ |
ತೇದು ರತಂಗಳೊಳ್ಪಣಮನಾಂ ಪಡೆಯೆಂದೊಡಿದೊಂದುದೋಷಮೇ||೧೬೧

ವ|| ಎಂದು ನಿಜಾಭಿಪ್ರಾಯಮಂ ಮರಸಿ ನುಡಿಯೆ ಕೇಳ್ದ ಮುಗಳ್ಮುಗುಳ್ದಿಂತೆಂದಳ್—

ವೃ|| ಮೊಲೆ ಮುಗುಳೊತ್ತುವಂದು ಮೊದಲಿಂದುವರಂ ಬಗೆದಂತಿರಿಚ್ಛೆಯಂ
ಸಲಿಸಿ ಸಮಾಪದೊಳ್ನೆಲಸಿ ಮುಗ್ಗುಲೊಳೊಗ್ಗಿರ್ಸಿ ಬೇಟಕೂಟಮಂ ||
ಕಲಿಸಿ ಕಲಾಳಿಯಿಂದೊಲಿಸಿ ಕೂರ್ತರ್ಮನಃಪ್ರಿಯನಂ ಬಿಡೆಂದು ನೀ |
ನೆಲೆಮುದುಪಾರಿದೊಳ್ತೆ ನುಡಿಯಲ್ಬಗೆದಂದುದನೆಂತು ಸೈರಿಪೆಂ || ೧೬೨

ವ|| ಪೆರಳೊರ್ವ್ವಳ್ಪೆರತೊಂದೆಡೆಯೊಳ್ಕುಂಟಣಿಮಾತಾಗಿ ಕನಲ್ದು ತನ್ನ ಕೆಳದಿಗಿಂತೆಂದಳ್

ವೃ|| ಮಸಗಿದ ಮಾರಿಯಂತೆ ಮುಳಿವಳ್ಪುಲಿಯಂತಿರೆ ಪೂಣ್ದು ಗರ್ಜಿಪ |
ಳ್ಪಸಿದಹಿಯಂತೆ ಪಲ್ಮೊರೆ[illegible]ನ ರಕ್ಕಸಿಯಂತೆ ರಂಜಿಪಳ್ ||
ಮುಸುಮೆನೆ ತನ್ನಮುತ್ತ ವ[illegible]ಡಿಂದಿರದೇಡಿಪಳೆನ್ನ ನಲ್ಲನೊ |
ಳ್ಬೆಸುಗೆಯ ಬಿಚ್ಚರ್ಲಾಟಿಪಳಿವಳ್ಮುದಿಗುಂಟಣಿ ಸಾಯಳೇವೆನಾಂ || ೧೬೩

ವ|| ಮತ್ತಮೊರ್ವ್ವಳ್ತನ್ನ ಕೆಳದಿ ವಿಟರೊಳ್ಮಾಳ್ಪ ಕೇಣಮಂ ಕಂಡಿಂತೆಂದಳ್—

ವೃ|| ವಿವಿಧವಿಳಾಸಮಂ ಮೆರೆದು ವಕ್ತ್ರಸುಧಾರುಚಿಯಿಂದೆ ಪೊಣ್ಮುವೀ |
ಸವಿನಗೆಯೆಂಬ ಸಾರಸುಧೆಯಂ ಸಲೆ ತೋರಿ ಭುಜಂಗವರ್ಗಮಂ ||
ಸವಿನಯಮೊಲ್ದು ಮಚ್ಚರ್ಪುದಿದಲ್ಲದೆ ಸೋಮ್ಮಡಿಯೆಂಬ ಕೇಕಿಯಂ |
ತವೆ ಮುಳಿದಾಳಿ ಪಿಂದಿರುಗಿ ಕಾಣಿಸಿ ಪೋಗಿಪುದೇಂ ಸುಬುದ್ಧಿಯೇ||೧೬೪

ವ|| ಮತ್ತಮೊರ್ವ್ವಳ್ಕೈತವಂ ಕೈಮಿಕ್ಕ ಕಾಳ್ಬೊಜಗನ ಮಾತಾಗಿ ಕಡುಕನಲ್ದು ಕೆಳದಿಯೊಡನಿಂತೆಂದಳ್—

ವೃ|| ದಿನದಿನದಲ್ಲಿ ತಾಳ್ದಿರವಿನೊಳ್ದೊಡಮಂ ಪೊರಮಿಂಚುಗೈದು ಬಂ |
ದೆನಗಿನಿವಾತನಾಡಿ ಧನಮಂ ಪಿರಿದಿತ್ತಪನೆಂಬ ಮಾಳ್ಕೆಯಂ ||
ಮನದೊಳಮಚ್ಚರ್ ಮಚ್ಚರ್ ನೆರೆದಿದ್ದರ್ನಿತುಂದಿನ ಮೇಳ್ದುಪೋದನಾ |
ತನ ಬಲಿಗಟ್ಟೆ ಮನ್ಮಥಬಳಾರಿಗೆ ಪೇಗ್ಗರಿಮಾಡಿ ಪೊಯ್ದುಪೇಂ || ೧೬೫

ವ|| ಮತ್ತಮೊರ್ವ್ವಳ್—

ವೃ|| ಬಳಿವಳಿಯಲ್ಲಿ ಬರ್ಪ್ಪನುಪಚಾರವನಾಡುವ ನೊಯ್ಯನಿರ್ದ್ದೊಡಾ ,
ಗಳೆ ಬಳಿಕೇಳ್ದು ಕಾಲ್ವಿಡಿದು ನಂಬಿಪನಿತ್ತಪ ನೀಗಳೆಂದು ತ ||
ನ್ನೊಳೆ ಸಲೆ ತಾನೆ ಸೂರುಳಿಸಿ ತಪ್ಪುವನೇಕೆನೆ ಬಾಯ್ಗೆ ಬಂದವೋ |
ಲ್ಗಳಪುವ ನಾವಗಂ ಧನಮನೀಯದೆ ಚಾಳಿಪನೆಂತು ಮಾಳ್ಪೆನಾಂ || ೧೬೬

ವ|| ಮತ್ತವೊಂದೆಡೆಯೊಳ್—

ವೃ|| ಇಲ್ಲದದೋಷಮಂ ಬರಿದೆ ಕಲ್ಪಿಪ ನಲ್ಪವೆನಿಪ್ಪ ತಪ್ಪನೊ |
ಯ್ದೆಲ್ಲರೊಳಾಡುವಂ ಪುರುಡಿಪಂ ಪುರುಳುಳ್ಳೊಡೆ ಮಚ್ಚನಿತ್ತುದಂ ||
ಸೊಲ್ಲಿಪನುಬ್ಬಸಂಬಡಿಪನೇಕೆನೆ ಲೆಕ್ಕಿಸನೆಯ್ದೆ ಸೂರುಳಿ |
ಟ್ಟಲ್ಲದೆ ನಂಬನೀದುರುಳನಂ ನೆರೆ ನೀಗುವೆನೆಂತು ಪೇಳ್ಸಖೀ || ೧೬೭

ವಚನ|| ಇಂತನೇಕರಸಭರಿತಮಾದ ಚತುರೋಕ್ತಿಗಳನಾಕರ್ಣಿಸುತ್ತುಂ ರಸಿಕ ಸಖ ನಿಕರವನವಸಂತಂ ಸಂತಸಂಬಿಗೆ ಮುಂದಣ್ಗೆ ಪೋಗೆಪೋಗೆ ಮತ್ತೊರ್ವಳ್ತನ್ನಮಗಳ್ದರಿದ್ರ ವಿಟನಂ ಮಚ್ಚಿರ್ಪುದಂ ಕಂಡು—

ಕಂ|| ನಾಗಿಣಿವೊಲೀಭುಜಂಗನ |
ಭೋಗಕೆ ತನುವಿತ್ತೆ ಸಂಪದಂ ಬಡೆದಪೆಯೆಂ ||
ತಾಗಳ್ಮನಗಿಲ್ಲದುದೀ |
ವಾಗರಿಮೆಯದೆಂತೊ ವಕ್ರಗತಿ ನಿನಗಕ್ಕುಂ || ೧೬೮

ವಚನ|| ಎನುತ್ತಿರೆ ಮತ್ತೊಂದು ಕೇಳೀನಿಳಯದೊಳ್ಮಳಿದಿರ್ದ ಮನದನ್ನಳಂ ತಿಳಿದಲೆಂದು ವಿಟಂ ನುಡಿಯಿಸುವಲ್ಲಿ—

ವೃ|| ಎಲೆ ಕಾಯ್ಪೇರಿದೆ ಚೈತ್ರವಲ್ಲರಿಯೆ ಗಂಧಂಗುಂದದಿರ್ದ್ದಪ್ಪೆಕಂ |
ಮಲರೇ ಮೇರೆಯನೊತ್ತಿ ವರ್ತಿಸುವೆ ಸಂವರ್ತಾಬ್ಧಿಯೇ ಬಂದುದೇ ||
ಕಲಿ ಮತ್ತೇಂ ಕೃತವೇ ಕೃಪಾನ್ವಿತಮೇ ಚಿತ್ತಂ ಕೌರವಕ್ಷೋಣಿಭೃ |
ದ್ಬಲಮೇ ಕರ್ಣಕಠೋರವಾನುಡಿಯಿದೇಂ ಪಾರ್ಥಾಸ್ತ್ರಮೇ ಮುಟ್ಟಿವಿರ್'||

ವಚನ|| ಎಂಬ ಮಹಾಪ್ರೌಢೆಯರ ಜಾಣ್ಣಾಪಂ ಕೇಳ್ದು ಮಚ್ಚುತ್ತಿರ್ಪ್ಪನ್ನೆಗ ಮೊಂದು ಮುತ್ತಿನ ಮೊಗಸಾಲೆಯ ಮುಂದಣ ಕನಕಮಯಕಮನೀಯವೇದಿಕಾಗ್ರದ ಕುಸುಮತಳ್ಪದೊಳ್ಕುಳ್ಳಿರ್ದ ವಲ್ಲಭೆ ನಲ್ಲನಂ ನೆಮ್ಮಿ ಚಲ್ಲದಿಂ ಮೆಲ್ಲನಿಂತೆಂದಳ್—

ಕಂ|| ವಾದಿಸಮನಾಂತನಾಮಮ |
ನಾದಂ ತಳೆದಾತನಳೆದುದೇಂ ಭೋಗಿಜನಾ ||
ಹ್ಲಾದಕನಾವಂ ತಾರಕ |
ಭೇದಕನಾವಂ ಕುಮಾರನಲ್ತೆ ಮೃಗಾಕ್ಷೀ || ೧೭೦

ವಚನ॥ ಎನೆ ಮುಗುಳ್ದವಳೊಡನವನಿಂತೆಂದಂ—

ಕಂ॥ ವನದ ಸಮುಧ್ಯದ ಪರ್ಯಾ |
ಯನಾಮದೊಳ್ಗಮಿಪುದೇಂ ತದಾಶ್ರಯಮೇಂ ಜೇ ||
ವನಕೆ ಮುನಿವವನದಾವಂ |
ವನನಿಧಿಯೆಂತಪ್ಪುದೆನಗೆ ಪೇಳ್ಕಮಳಾಕ್ಷೀ ॥ ೧೭೧

|| ವಿಧ್ರುವಮುಹಿತಂ ॥

ವಚನ॥ ಮತ್ತಮೊಂದು ಸೆಜ್ಜೆವನೆಯೊಳೊರ್ವ್ವ ಕ್ಕರಿಗಬೊಜಗಂ ಸೊಕ್ಕುರ್ಗ್ಗಂ ಜೌವನೆಗೆ ಸಕ್ಕದದ ಬಹಿಲ್ಲರ್ಾಪಿಯಂ ಪೇಳ್ದನದೆಂತೆನೆ—

ವೃ॥ ಬ್ರಹ್ಮಾಣೀ ಕಾ ಜನೇಷ್ಟಂ ದದತಿ ಝುಡಿತಿ ಕೇ ತಾಪಸಾಂಗಂಚ ಕೀದೃ|
ಕ್ಪ್ರೀತಾ ಕಾ ಕುತ್ರ ವಿಶ್ವಂ ನಿವಸತಿ ವಿಬುಧಾಬೋಧನಂ ಕಿಂ ನೃಪಾಲಃ ||
ಕಸ್ಯೈ ಸಂನದ್ಧ ಈಶಃ ಪತಿರಿತಿ ವಿದಿತಃ ಕಸ್ಯ ವಂದ್ಯೌಚ ಕೌ ಕಿಂ |
ವಕ್ತೀಶಂ ಕೌ ಜಗತ್ಸಂಹರಣಕೌ ಮಂಗಳೋಕ್ತಿಃ ಕವೇಃ ಕಾ ॥ ೧೭೨

ವಚನ|| ಎನೆ ಕೇಳ್ದವಳ್ಕಾಳಿದಾಸಕವಿರಚಿತಕಾವ್ಯಾದಿಯಂತಲರ್ಾಪಿಯಿನುತ್ತರಂಪೇಳ್ದವನ ಚಿತ್ತಂಬಡೆದಿದ್ದರ್ಗಳಿತ್ತಲ್[...]ನೆಡೆಯೊಳೊರ್ವ್ವಮತ್ತ ಕಾಮಾನಿ ಕಾಂತನೊಳ್ಪ್ರಹೇಳಿಕೆಯಂ ಸೊಲ್ಲಿಸಿದಳದೆಂತೆನೆ—

ಶ್ಲೋ॥ ರಣೇನ ಸಾಧ್ಯತೇ ಸರ್ವಂ |
ಮತೇನ ಧ್ರೀಯತೇ ಮಹೀ ॥
ಅಸಾರೆ ಕ್ರೀಡತೇ ಹಂಸಃ |
ಕವಿಶೇಷೇ ಕಿಮದ್ಭುತಂ || ೧೭೩

ವಚನ॥ ಇಂತಪ್ಪನೇಕಚತುರಗ್ರಂಥಂಗಳಂ ಕೇಳ್ದು ಮಚ್ಚುರ್ತ್ತಂ ಚತುರಜನಮನಚ್ಚಕೋರಚಂದ್ರಂ ನಾಗರಿಕನೊಳ್ಪೊಗಳುತ್ತಿರೆ ಮತ್ತೊಂದು ಮಣಿಭವನದಂಗಣದೊಳ್ಮಾತೆಯೊಡನೆ ಮುಳಿದು ಮಗಳ್ನಿಂದಿಪ್ಪುದುಮವಳ್ಪಿಡಿದಿಂತೆಂದಳ್—

ವೃ॥ ಮಗಳೆ ಮದೋಜ್ಞಮಾತೆ ಮಿಗಿಲಿತ್ತೊಡೆ ಮಿಾರದಿರಾತನಾಜ್ಞೆಯಂ |
ಮುಗುಧೆ ಕಳಲ್ಚು ಮೂಢತೆಯ ಮೇಣದ ಪುತ್ಥಳಿಯಂತೆ ಮೆಯ್ಯನಿ ||
ತ್ತಗಲದೆ ಕೂಡಿ ಮೋಹಿಸಿ ಧನಂಬಡೆ ಮೌನಮಿದೇಕೆ ಮಂದಿರಂ |
ಬುಗನಡೆ ಮಸ್ತಕಂದೊನೆಯದಿರ್ಕ್ಕಡುಮೂರ್ಖತೆಬೇಡ ಕಾಮಿನೀ ||೧೭೪

ವಚನ|| ಮತ್ತೊಂದು ಗೃಹಾಂತರಾಳದೊಳ್ಕುಳ್ಳಿರ್ದ ಜಘನ್ಯಭುಜಂಗನಂ ತೋರಿ ಕೆಳದಿಯೊಡನೆ ಪದಿರಿಂದಿಂತೆಂದಳ್—

ವೃ|| ಪರಮಶ್ಲಾಘ್ಯಗುಣಾ ಸದಾಮದಹಿತಂ ಶೌರ್ಯೋತ್ತರಂ ಗಂಧಬಂ|
ಧುರನೆಂದುಂ ನರಸಾರಮೇಯನಬಳಾಪ್ರೇಮಾಸ್ಪದೋದ್ಯದ್ವನೇ ||
ಚರನೇತ್ರಾಸ್ಯನನಂಗರೂಪನತನು ಕ್ರೀಡಾವಿನೋದಂ ಮನೋ |
ಹರನೀತಂ ನಸುಪಿಂಗೆ ಬಕ್ಕರ್ವೆನಗೀಗಳ್ಪ್ರಾರವಶ್ಯಂ ಸಖೀ || ೧೭೫

ವಚನ|| ಎನೆ ತನ್ನಂ ಪೊಗಳ್ದಪಳೆಂದು ಮುದಂಬಡೆದಿರ್ದನಲ್ಲಿ ಮತ್ತೊಂದೆಡೆಯೊಳ್ಶ ಶಿಕಾಂತಕಾಂತಕೇಳೀನಿಕೇತನದೊಳ್ಚಂಚತ್ಕಾಂಚನಮಂಚದ ಮೃದುಳಧವಳಶಯ್ಯಾತಳದೊಳೊಯ್ಯನೆ ರಯ್ಯಮೆನೆ ಕಯ್ಯಂ ಪಿಡಿದು ಮೆಯ್ಯಂ ಸೋಂಕಿ ಮನದಂನಲೊಡನೆ ಮದನಕೇಳಿಗೆಳಸಿ ಮಹೋತ್ಸವದಿಂ ಮನೋರಮುಣಂ ಕುಳ್ಳಿರ್ದ್ದ ನೇಹಂ ಮಿಗೆ ನಿರೀಕ್ಷಿಸಿ—

ವೃ|| ಅಂದುಗೆಯಂ ಕಳಲ್ಚಿ ಪೊಸಮೂಕುತಿಯಂ ಬಿಡದೇರನೂಂಕಿ ತ |
ಳ್ತಂದದ ಹಾರಮಂ ಕೊರಲ ಹತ್ತಸರಕ್ಕೆ ತೊಡರ್ಚಿ ಸಾರ್ಚಿ ಚೆ ||
ಲ್ವೊಂದಿದಕೇಶಮಂ ಬಿಗಿದು ಬಂಧಿಸಿ ನೋಳ್ಪನಿಜೇಶನಿಚ್ಛೆಯಂ |
ಸುಂದರಿ ಸೋಡಿ ಕಯ್ಗಡಗಮಂ ತೆಗೆದಾತನ ಕೈಗಮರ್ಚಿದಳ್ || ೧೭೬

ಹಸನರಸಂ ಮುಖಾಂಬುಜರಸಂ ಬೆರಸುತ್ತಿರೆ ಕುಂಡಲಂಗಳುಂ |
ಮಿಸುಪಕುಚಂಗಳುಂ ಕುಣಿಯೆ ನುಣ್ದೊಡೆಯ[illegible]ಮುವುಂ ಕಡಂಗಿ ಕಂ ||
ಪಿಸೆ ನರುಸುಯ್ಗಳುಂ ಭ್ರಮರಕಂ ಪರಿದೊಪ್ಪಿ[illegible]ರ್ಮವಾರಿಗ |
ಳ್ಸಸಿಲ ರಸಂಗಳುಂ ಸುರಿಯೆ ಜಾಣೆ ಜವಂಗೆಡದೊತ್ತಿ ಕೂಡಿದಳ್ ||೧೭೭

ಪ್ರಿಯಕರಜಕ್ಷತೇಂದು ಕಳೆಯೊಂದೆ ಭಯಂಬಡೆದಂತುರೋಜಚ |
ಕ್ರಯುಗಳಮುಂ ಕದಕ್ಕದಿಸೆ ಸಂಪಗೆಗಂಪನಮುಚ್ಚುತೇಳ್ವಸುಯ್ ||
ರಯದೊಳೆ ತಾಗೆ ತಲ್ಲಣಿಪವೋಲ್ಚಲಿಸುತ್ತಿರೆ ಕುಂತಳಾಳಿ ಕಾಂ |
ತೆಯ ಜಡೆವಾವು ಪೊಯ್ದೊಡಗಿದಂತೆ ಬೆಮರ್ತುದು ವಕ್ತ್ರಚಂದ್ರಮಂ||೧೭೮

ವಚನ|| ಇಂತು ಸವಿಸುಸಿಲ ಸೊಗಮನನುಭವಿಸಿದನಂತರಂ—

ವೃ|| ಮುಗಿದಲರ್ಗಂಗಳಿಂ ಪರೆದಕುಂತಳದಿಂ ಬಿಡದೇಳ್ವಸುಯ್ಗಳಿಂ |
ತೆಗೆಬಗೆಗೊಂಡು ಮೆಯ್ಮರೆವಚಿತ್ತದಿನುಣ್ಮುವ ಘರ್ಮವಾರಿಯಿಂ ||
ಮಿಗೆ ರಸವಾರಿದಿಂದುಟಿಯಿನಾರತಿಮೂರ್ಛಿತೆ ಜೋಲ್ವದೇಹದಿಂ |
ಸೊಗಯಿಸಿದಳ್ಭುಜಂಗಪರಿದಷ್ಟತೆಯಂ ತವೆಸೂಚಿಪಂದದಿಂ || ೧೭೯

ವಚನ|| ಅವಳಂ ನಾಗರಿಕಂ ನೋಡಿ ಪೊಗಳ್ವನಿತರೊಳೊರ್ವ್ವವೃದ್ಧನೊತ್ತ ಗುಡಲೆಂದು ಬಂದಿರೆ ಮತ್ತೊರ್ವ್ವಳ್ಚಪಲೆ ಮೆಲ್ಲನೆ ಪೊರ್ದ್ದಿ ನಗುತಿಂತೆಂದಳ್—

ವೃ|| ತರಳನಿದಾವನೊತ್ತೆಗುಡಬಂದಪನಕ್ಕಟ ಕಾಣನೇಕೆ ಕ |
ಣ್ಗುರುಡನೊ ದಂಡವುಂ ಪಿಡಿದನಲ್ಲವೆನುತ್ತಿದೆ ಶೀರ್ಷಕಂಪನಂ ||
ತೆರೆಯಿದು ನೋಳ್ಪೊಡಾಸ್ಯರಸದಿಂ ನೆಗೆದಿರ್ದ್ದುದೊ ಗಡ್ಡವಿಾಸೆಯೊ |
ಳ್ಪರೆದಿದೆ ಬೆಳ್ಪು ನಿರ್ಗತ ರದದ್ಯುತಿಗೊಂಡುದೊ ತಾನಿದದ್ಭುತಂ || ೧೮೦

ವಚನ|| ಮತ್ತಮದಲ್ಲದೊರ್ವ್ವ ವೃದ್ಧಾಂಗನೆ ತಲೆವಾಗಿಲೊಳ್ನಿಂದು ಬೆಲೆವೆಣ್ಗಳಂಗಸಂಗದಿಂಗಿತಮಂ ಬಲ್ಲ ಬರ್ದ್ದಿನ ಬೊಜಗರಂ ಮರುಳ್ಮಾಳ್ಪ ಬಲ್ಮೆಗೊಲ್ಮೆ ಗಾನೇ ನೋಂತೆನೆಂದು ಸಿರ್ವ್ವನಿತರೊಳಾ ಕರ್ಣಿಸಿ ವಿದೂಷಕನವಳಿರ್ದ್ದೆಡೆಗೆ ಸರಸರನೆ ಪೋಗಿ—

ಕಂ|| ಉದರದ ವಳಿಗಳ್ನಿನ್ನಯ |
ವದನಮನೈದಿದುವು ಕುಚದ ಬಿಣ್ಪುದರಮನೈ ||
ದಿದುದಳಕಮೈದಿದುದು ಕ |
ಣ್ಗದಿರಿದು ಮುದಿಪಾರಿ ಪೇಳಿದೇನಚ್ಚರಿಯೋ || ೧೮೧

ವ|| ಪೆರತೊಂದೆಡೆಯೊಳೊರ್ವ್ವಂ ಪರಿಹಾಸರಸಪ್ರಕಾಶಕಂ—

ವೃ|| ನೆಗೆದಪೆಯೋಧರದ್ವಯಮಿದೇಕೆಲೆ ಬಿಳ್ದುದು ಬರ್ದ್ದೆ ಪೇಳ್ವುದೆಂ |
ದಗಿಯದೆ ಕೇಳೆ ಪೇಳ್ದಳ[illegible]ಟನೀಂ ರತಿಕಾಲದಲ್ಲಿ ಕೆಂ ||
ಮಗೆ ಕರಮಿಟ್ಟು ಮರ್ದಿ[illegible]ಹುಂಕೃತಿಗೆಯ್ದೊಡನರ್ಧಚಂದ್ರನಂ |
ಮಿಗೆ ಕುಡೆ ಕಾಮುಗೇಹಕದನಾವುದನಂಗಿದು ಪೇಳಲೈದುಗುಂ || ೧೮೨

ವಚನ|| ಮತ್ತಂ—

ಕಂ|| ಎಳೆಯಳೆ ನೀನಲ್ಲಳೆ ಪೇ |
ಳೆಳೆಯಳೆ ನಿನ್ನಳಕ ಕಾಂತಿಯೆಲ್ಲಿದೆ ಪೇಳೆ ||
ನ್ನೊಳೆ ನೀನಬಳೆಯೆ ಪೆರತೇಂ |
ತಿಳಿವೊಡೆ ನೀನಬಳೆಯೆಂಬುದರಿಯದೆ ಲೋಕಂ || ೧೮೩

ವಚನ|| ಎಂಬಮಾತಂ ಕೇಳ್ದು ವಿನೋದಮುಕರಂದಮಧುವ್ರತಂ ನಸುನಗುತ್ತುಂ ಬರೆವರೆ ಮುಂದೊಂದುಚಂದ್ರಮಣಿ ರಮಣೀಯಕುಟ್ಟಿಮಸ್ಥಳದೊಳುನ್ಮತ್ತಯೌವನಾಂಗಿಯೊರ್ವ್ವಳ್ಸರ್ವ್ವಮಲ್ಲಭಾಜನಮಧ್ಯದಲ್ಲಿ—

ವೃ|| ಬಿಡುಮುಡಿ ಬೆನ್ನೊಳಾಡೆ ಕುರುಳುಂ ಪಣೆಯೊಳ್ಕುಣಿದಾಡೆ ಪೊಣ್ಮೆ ಪೊಂ
ಗೊಡಮೊಲೆಯಲ್ಲಿ ಹಾರಮೊಲೆದಾಡೆ ನಿಜಶ್ವಸಿತೋರುಸೌರಭ ||
ಕ್ಕೊಡನೆಡೆಯಾಡೆ ತುಂಬಿ ಮಿಳಿದರ್ಾಡೆ ಕಟಾಕ್ಷಮರೀಚಿ ಕುಂಡಲಂ |
ಬಿಡದಮುದರ್ಾಡೆ ಗಂಡದೊಡನಾಡಿದಳಂಗನೆ ಚಂಡನಳ್ತಿಯಿಂ || ೧೮೪

ಜಡಿಯುತ್ತಿರೆ ಸುಣ್ಮೊಲೆಯುಂ ಮುಡಿಯುಂ |
ಪೊಡರುತ್ತಿರೆ ಪೂರ್ಣಘನಂ ಜಘನಂ ||
ಸೆಡೆಯುತ್ತಿರೆ ತೆಳ್ನಡುವುಂ ತೊಡೆಯುಂ |
ಪೊಡೆದಳ್ಪಿಡಿದಳ್ಪುಟಚೆಂಡನವಳ್ || ೧೮೬

ವಚನ|| ಮತ್ತಂ—

ವೃ|| ಸಿರಿಗಾನಾವಾಸಮಾದೆಂ ಹರಿಗೆ ನಯನಮಾಬೊಮ್ಮನೆನ್ನಾತ್ಮಜಂ ಭಾ|
ಸ್ಕರನಾಪ್ತಂ ನೋಡದೆನ್ನೊಂದಳವನೆಲೆ ಕಲಂಕಾಶ್ರಯಂ ರಾಹುದಷ್ಟಂ ||
ಚಿರದೋಷಾವಿಷ್ಟನಾದಂ ಕ್ಷಯಿ ಪಗೆತನಗೊಂಡಂ ಗಡಾ ಯೆನ್ನೊಳೀಚಂ |
ದಿರನೆಂದಂಭೋರುಹಂ ಪೊಯ್ದಪುದಿದನೆನೆ ತತ್ಪಾಣಿ ಪೊಯ್ದತ್ತು ಚೆಂಡಂ ||

ವಚನ|| ಅಂತವಳಂದವಂ ಕಂಡಿದು ನೋಟಕಬೊಜಗರೆರ್ದೆಯೊಳ್ಕಂತುಕಾಲಾಗ್ನಿಯಂ ಪೊಯ್ವಂದವಲ್ಲದೆ ಕಂತುಕಮಂ ಪೊಯ್ವಂದವಲ್ತೆಂದುನಾಗರಿಕಂ ಸೊಲ್ಲಿಸುತ್ತಂ ಬರೆವರೆ ಮತ್ತವೊಂದು ಬಿತ್ತರಂ ಬಡೆದ ಬಜ್ಜರದ ಸೌಧಾಂಕಣದೊಳ್ಕೈಗೈಯ್ದ ಪದ್ಮರಾಗ ರುಚಿನಿಚಯ ಕವಚಿತಸಮುತ್ತುಂಗಶಾತಕುಂಭ ಸ್ತಂಭಂಗಳಿಂ ಸಮುಚಿತಸ್ಥಾನದೊಳಿರಿಸಿ ನಿರ್ಮಿಸಿದ ಮರಕತಾದಿಮಣಿಮಯ ಮಯೂರ ಮಂಡಿತ ಮಧ್ಯಸ್ಥಳತುಲಾದಂಡದಿನೆಡೆಯೊಳ್ತೊಡರ್ಚಿದ ಮಳರಮಣೀಯಮಣಿಮುಕುರ ಘನಕಳಶ ಘಂಟಿಕಾರು[illegible]ತಕಿಂಕಿಣೀ ಜಾಲಮಾಲಿಕಾ ಪಙ್ತಿಯಿಂ ತುದಿವಳಸಿನೊಳೆಳಲೆ ವಿಟ್ಟಳವಡಿಸಿದ ರುಚಿರಚಾಮರ ಹೇಮ ಚಂಪಕೋದ್ದಾಮ ದಾಮವಿಚಿತ್ರಚಿತ್ರಾಂಬರವಿತಾನದಿ ನಮರ್ಚಿ ರಚಿಸಿದ ಕಮನೀಯತಪನೀಯಶೃಂಖಲಾಚತುಷ್ಕಸಂಘಟಿತ ಸಮುಜ್ಜ್ವಳ ವಜ್ರಮಣಿಪರ್ಯಂಕಿತ ಪಟ್ಟದಿನಳಂಕೃತಿ ವೆತ್ತಸೆವ ನವಿಲುಯ್ಯಾಲೆಡೆಗೆನಂಗಲಕ್ಷ್ಮಿಯಂತೆಸಖೀಜನಂ ಬೆರಸುಬಂದಾಂದೋಳಕೇಳೀಸಮಯ ಸಮುಚಿತೋಪಚಾರಮಂ ಮೆರೆದು—

ವೃ|| ಏರೆ ಮುದಂ ಮನೋಜ ಜಯಲಕ್ಷ್ಮಿಗೆ ಪೂರ್ಣವಿಳಾಸಮಾರ್ಥಿ ನೀ|
ರೇರೆ ಸಖೀಜನಕ್ಕೆ ಪದೆದೀಕ್ಷಿಪ ರಂಗದೊಳಂಗಜಾಗ್ನಿ ಕಾ |
ಯ್ಪೇರೆ ನಿಜಾಂಘ್ರಿಪಂಕಜ ನಿಪಾತಭಯಂ ಶಶಿಗೇರೆ ನೀರೆ ತಾ |
ನೇರಿದಳುಯ್ಯಲಂ ಬಗೆಗೆ ಸಂತಸವೇರೆ ವಸಂತರಾಜನಾ || ೧೮೭

ವಚನ|| ಅಂತೇರಿ ಮಣೆಯಂ ಮೆಟ್ಟಿ ಮಣಿದು ನಿಂದು—

ವೃ|| ಮೆಯ್ಯಕುಂಕುಮ ಮಿನದ್ಯುತಿಯೆತ್ತಂಪರ್ಬಿರೆ ಬಿಚ್ಚಿದಚಕ್ರಮುಂ|
ರಯ್ಯಮಾಗುತಲರ್ದಬ್ಜಮುಮಾಶೀತಾಂಶುಗೆ ದಾಳಿಯಪೋಪವೋಲ್ ||
ಸುಯ್ಯಗಾಳಿಗಲೆವಂಚಲದಿಂದಂ ತೋರ್ಪ್ಪಕುಚಂ ಮೊಗವೊಪ್ಪಲಂ |
ದುಯ್ಯಲಾಡಿಸುತೆ ನೋಳ್ಪರಕಣ್ಣಂ ಕಾಮಿನಿ ಯಾಡಿದಳುಯ್ಯಲಂ || ೧೮೮

ವಚನ|| ಮತ್ತ ಮೊರ್ವ್ವಳಪೂರ್ವಸೌಂದರ್ಯವತಿ ತನ್ನ ಪೊನ್ನ ಕಸ್ಸೆ ಮಾಡದಕೆಲದರಾಜಾಂಕಣದ ಪಚ್ಚೆಯ ಕುಟ್ಟಿಮಸ್ಥಳದೊಳಳವಟ್ಟರನ್ನದುಯ್ಯಲನೇರಿ ಚಂದ್ರಿಕಾಸಾಂದ್ರಪೀಯೂಷವಾರ್ಧಿಯೊಳೋಲಾಡುತೊಗೆತಸ್ಪರ್ಕಮಳಿಯಂತೆ ಕಮನೀಯತೆಯನಪ್ಪುಕೈದು—

ವೃ|| ಗಗನಸರೋಜಮಿಲ್ಲೆನಿಪವಾಕ್ಯಮನಿಲ್ಲೆನಿಪಂತೆ ಸುಣ್ಮೊಗಂ |
ಬಗೆಗೊಳೆ ಬಾನೊಳಾಗಳದರೊಳ್ಮರಿದುಂಬಿಗಳಾಡುವಂತೆ ಮೆ ||
ಲ್ಲಗೆ ನೆಗೆದಾಡೆ ಮುಂಗುರುಳಸಾಲ್ಗಿರಗಳ್ದಿರಿಯೊಳ್ಪಳಂಚಲೆಂ|
ಡಗಿಯದೆ ಪಾರುವಂತೆಸೆಯೆ ಪೆರ್ಮ್ಮೊಲೆಗಳ್ಪದೆದುಯ್ಯಲಾಡಿದಳ್ || ೧೮೯

ವಚನ|| ಮತ್ತಮೊರ್ವ್ವಳಲಘುತರ ನಿತಂಬಬಿಂಬೆ ಸಂಭ್ರಮಂಬೆರಸು ಸಖೀಜನ ಮಧ್ಯದೊಳಂದಂಬಡೆದಾಂದೋಳಮ ನಾಡುವಾಗಳ್—

ಕಂ|| ಅಳಿಪಿಂ ನೋಳ್ಪರ ದೃಷ್ಟಿಗ |
ಳಳಂಕೆಯಿಂ ನೂಂಕೆ ಭೋಂಕನೊಗೆವವೊಲೆನಭ ||
ಸ್ಸ್ಥಳಕಮರ್ದ್ದು ತನ್ಮನಂ ಬರ |
ಸೆಳೆಯೆ ಮಗುಳ್ದಿಳಿವ ಭಾವಮಂ ಬಗೆಗಿತ್ತಳ್ || ೧೯೦

ವಡನ|| ಇಂತೊಪ್ಪುವನಂತ ಕಾಂತಕಾಂತಾ ಸಂತಾನ ಕಂತುಪ್ರಧಾನ ನಾನಾ ವಿಳಸಿತವಿಳಾಸಮನಿಳಾಪತಿಸುತನಲ್ಲಿ ಗ[illegible]ಂದು ನಿಂದೀಕ್ಷಿಸುತ್ತೆ ಮಿತವಚನ ಮುಖಸಖನಿಕರದೊಳ್ನುಡಿಯುತ್ತಂ ನಡೆತರುತ[illegible]ರ್ಪ್ಪಗೆಳ್—

ವೃ|| ಕೂಜತ್ಕಾರೆಂಡಕಾದಂಬಕನುಖವಿಕಿರತ್ಪಕ್ಷತಿಕ್ಷುಬ್ಧಬದ್ಧಾಂ |
ಭೋಜಭ್ರಾಜಿಷ್ಣು ಬದ್ಧಾದರ ಸರದಳಿಸುಸ್ನಿಗ್ಧಗಂಧಾನುಬಂಧಂ ||
ರಾಜಾಸ್ಯಾವೇಕ್ಷಣೋಸ್ನಿದ್ರಕುಮುದಮುಕುಲಾರಂಭಿರಂಭೋರುಕುಂಭೋ
ರೋಜಶ್ರೀಖಂಡಮಿಶ್ರಶ್ರಮಜಳಕಣಿಕಾಹಾರಚೋರಂ ಸವಿಾರಂ || ೧೯೧

ಕಂ|| ಸುಳಿದುದು ಬೆಳಗಪ್ಪುದನೊ |
ಲ್ದಿಳೆಯರಸಂಗೈದಿ ಪೇಳ್ವವೇಳಾಚರನಂ ||
ತಳಿಕುಳ ಮರಾಳ ಕಳಮಂ |
ಜುಳರವ ವಿಜ್ಞಾಪನೈಕ ರವನಾಪವನಂ || ೧೯೨

ವಚನ|| ಅನಂತರಂ—

ವೃ|| ಪದಪಿಂದಿಂತಪ್ಪ ನಾನಾವಿಧ ರತಿರಸ ಸಂಮಿಶ್ರ ವೇಶ್ಯಾವಿಳಾಸಾ |
ಸ್ಪದಚಂಚಚ್ಚಂದ್ರಿಕಾ ಸಂಪದಮೆ ಸಫಳಮಪ್ಪಂತೆ ವೋಲ್ಮಾಡಿ ಬಂದ ||
ಗ್ಗದ ಮಿತ್ರಶ್ರೇಣಿಯಂ ಮನ್ನಿಸಿ ಕಳಿಪಿ ನಿಜಾಂತಃಪುರಕ್ಕೈದಿದಂ ಸಂ |
ಮದಕೃದ್ಗಿರೀಶ ಪೂಜಾಹಿತಮತಿ ಶಿವಸಿದ್ಧಾಂತ ದುಗ್ಧಾಬ್ಧಿಚಂದ್ರಂ||೧೯೩

ಭೃಂಗವೇಣಿ ಶುಕವಾಣಿ ನಿರ್ಮಿತಾ |
ನಂಗನೇತ್ರೆ ಸುಚರಿತ್ರೆ ನಿರ್ಜರೋ ||
ತ್ತುಂಗ ಸೇವ್ಯೆ ಮುನಿಭಾವ್ಯೆ ಶಂಕರಾ |
ರ್ಧಾಂಗಸಂಗೆ ಜಯ ಸರ್ವಮಂಗಳೇ || ೧೯೪

ಗದ್ಯ|| ಇದು ವಿನಮದಮರವರ ಮಕುಟ ತಟ ಘಟಿತ ಮಣಿಗಣ ಮಹಾಪ್ರಭಾ ಪಟಲಪರಿವೃತ ಪರಶಿವ ಶ್ರೀಪಾದ ನಖ ಚಂದ್ರ ಸಾಂದ್ರ ರುಚಿರುಂದ್ರ ಚಂದ್ರಿಕಾ ಚಂಚಚ್ಚಕೋರಾಯಮಾನ ಸರಸಜನ ಮಾನಿತೋಭಯ ಕವಿತಾ ವಿಶಾರದ ಶ್ರೀಷಡಕ್ಷರದೇವ ವಿರಚಿತಮಪ್ಪ ರಾಜಶೇಖರವಿಳಾಸ ವಿಪುಳ ಪ್ರಬಂಧದೊಳ್ರಾಜಶೇಖರ ನರೇಂದ್ರ ಚಂದ್ರಿಕಾ ವಿಹರಣ ವರ್ಣನಮೇಕಾದಶಾಶ್ವಾಸಂ ಸಂಪೂರ್ಣಂ



## ದ್ವಾದಶಾಶ್ವಾಸಂ

(ರಾಜಶೇಖರ ಸಭಾವರ್ಣನಂ)

ಕಂ|| ಶ್ರೀಕಾಳೀ ನವಯೌವನ |
ಮಾಕಂದಶುಕಂ ಶುಕಾದಿಮುನಿಜನಹೃದಯಾ ||
ಬ್ಜಾಕರಮರಾಳನಮಳಗು |
ಣಾಕರನೆಮಗೀಗೆ ಸೌಖ್ಯಮಂ ಶಿವಲಿಂಗಂ || ೧

ವಚನ|| ಮತ್ತಮಾಗಳ್ ಬ್ರಾಹ್ಮೀಮುಹೂರ್ತಮೆಂಬ ಪೂಜಾಮುಹೂರ್ತದಲ್ಲಿ—

ವೃ|| ಹಿಮಸಂಮಿಶ್ರಾಂಬುವಿಂ ಮಜ್ಜನಮನೊಲವಿನಿಂ ಮಾಡಿ ದೇವಾಂಗಮಂ ತಾ
ಳ್ದಮಳಾಂಗಂ ಭೂತಿರುದ್ರಾಕ್ಷ ಮನಮರೆ ನಿಜಾಂಗಂಗಳೊಳ್ಧಾರಣಂ ಗೆ ||
ಯ್ದು ಮಹಾಮಂತ್ರಾಂತರಂಗಂ ಸಮುಚಿತವಿಧಿಯಿಂ ಪೂಜಿಸುತ್ತಿರ್ದ್ದನಾನಂ |
ದಮನಾದಂ ಪೊರ್ದ್ದಿ ಗೌರೀರಮಣ ನಡಿಗಳಂ ಶೈವವಿದ್ಯಾಸಮುದ್ರಂ || ೨

ವಚನ|| ಅಂತಾ ಮಹೀಕಾಂತನೇಕಾಂತದೊಳುಮಾಕಾಂತನ ನರ್ಚಿಸುತ್ತುಮಿರೆಯಿರೆ—

ವೃ|| ಒದೆದುದ್ಯದ್ಗೇಹಪಾರಾವತದ ನಿನದಮಂ ತಾಮ್ರಚೂಡವ್ರಜೋನ್ನಾ |
ದದ ಪೆರ್ಚ್ಚಂ ಪೊಯ್ದಳಿಧ್ವಾನಮನೆ ತುಳಿದು ಗಾಣಿಕ್ಯಹರ್ಮ್ಯಾಗ್ರಗಾ ||
ಯತ್ಸುದತೀಸಂಗೀತ ತಾರಸ್ವರಮನಲೆದು ದಿಕ್ಪ್ರಾರಮಂ ಪರ್ಬ್ಬಿ ರೋದೋಂ |
ತದೊಳೆತ್ತಂ ಸುತ್ತುತಿರ್ದ್ದತ್ತಭವ ಭವನಸಂಪೂರಿತಂ ಶಂಖನಾದಂ || ೩

ಕಂ|| ನೆರೆದಿರು ಳಿರುಳೆರೆಯನೊಳುರೆ |
ಸುರತಾಂತದ ಮೂರ್ಛೆದಳೆಯೆ ಕೆದರ್ದವಳಳಕೋ ||
ತ್ಕರವೆನೆ ಮುಗುಳ್ದಂ ಮುಬ್ಬ್ರ್ |
ವರಿಸಿದುದೆಲ್ಲೆಡೆಯೊಳ ಸತಿಯರ್ನಲಿಯಲೊಡಂ || ೪

ವೃ|| ಪೊದೆಯುತ್ತುಂ ಮೇಲುದಂ ಮೆಲ್ಲಡಿಯಿಡುತಿಳೆಯೊಳ್ಮೆಲ್ಲನಲ್ಲಲ್ಲಿನಿಂದಿ |
ರ್ದ್ದಿದಿರಂ ಕಣ್ಮುಂಚದಂತೀಕ್ಷಿಸುತೆಡಬಲದೊಳ್ಪೊಸ್ಸಪ್ಪುಳಾರೈವುತುಂ ಬಿ ||
ಚ್ಚಿರ್ದ ನೀವೀ ಬಂಧಮುಂ ಬಂಧಿಸುತಳಿದಳಕಶ್ರೇಣಿಯುಂ ತಿದ್ದುರ್ತುಂ ಸು |
ಣ್ಣಿಗದಪಂ ಪತ್ತಿರ್ದ್ದ ತಾಂಬೂಲರಸಮನೊರಸುತ್ತೈದಿದ ಳ್ಪಾಣ್ಬೆಯೊರ್ವ್ವಳ್ ||

ವಚನ|| ಪೆರತೊಂದು ತಾಣದಲ್ಲಿ —

ಕಂ|| ಅಸವಸದಿಂ ಸುಸಿಲೆಸೆಗು |
ತ್ತಸತಿ ಮೊದಲ್ತಾರಿದ ಸಿತವಸನ ಮಿದೆಂದಾ ||
ಪೊಸಮುಬ್ಬ್ರ್ ಸುಡಲ್ತೆಗೆದತಿ |
ಹಸನ ರಸಂ ಬಡೆವಳೊಸೆದ ಪಾಣ್ಬನ ಮೊಗದೊಳ್ || ೬

ವಚನ|| ಮತ್ತಮೊವ್ವ[illegible]

ವೃ|| ಏಲುಲಿತ ಘುಮ[illegible]ರಿಕಣದಿಂ ಕೆಸರೇಳ್ದಿಳಿತಪ್ಪಗಂಡಮುಂ |
ಡಳಕೃತಪತ್ರಭಂಗ ಮೃಗನಾಭಿಜಮುಂ ಬಳಿದಿಟ್ಟುರೋಜಮುಂ ||
ಡಳದ ನಖಕ್ಷತಕ್ಕಧರದೊಳ್ತಲೆದೋರ್ಪ್ಪರದಕ್ಷತ ಕ್ಕುರ |
ಸ್ಥಲದ ರಸಾರ್ದ್ರಕುಂಕುಮ ಮನಂಕಿಸಿ ಜಾಣ್ಮಗೆ ಪಾಣ್ಬೆಯೈದಿದಳ್ || ೭

ವಚನ|| ಆಸಿತಗೆ ಯಲ್ಲದೆಯು ಮನ್ಯಪ್ರದೇಶದಲ್ಲಿ —

ವೃ|| ನೋಡಿದನಿಂತು ನೋಡಿರಸದಂಬುಲಮುಂ ಸವಿದಿತ್ತು ಚುಂಬನಂ |
ಮಾಡಿದ ನಿಂತುರೋಜಯುಗಳಂ ನಿಜವಕ್ಷದೊಳೊಪ್ಪಲಪ್ಪಿ ಮುಂ ||
ಡಾಡಿದನಿಂತು ತಳ್ತು ತನು ಜೋಂಪಿಸಿ ಜುಂಮಿಡೆ ಸೋಂಕಿ ಸೊರ್ಕ್ಕಿಮೈ |
ಗೂಡಿದ ನಿಂತುಟೆಂದಸತಿ ಸ್ನವಸಂ ನೆನೆಯುತ್ತು ಮೈದಿದಳ್ || ೮

ಕಂ|| ಜಾರೆ ನಿರಿ ಜಾರೆ ಸೋರ್ಮುಡಿ |
ಜಾರೆ ಬೆಮರ್ಜ್ಜಾರೆ ಮೇಲುದದು ಮುಡಿದಲರ್ಗ ||
ಳ್ಜಾರೆ ಮುದಂ ಜಾರೆ ಮದಂ |
ಜಾರೆ ಪದಂ ಜಾರೆ ಜಾರೆ ಜಾರಿದಳೊರ್ವ್ವಳ್ || ೯

ವಚನ|| ಪೆರತೊಂದುತಾಣದೊಳ್—

ವೃ|| ಮನೆಯಾಣ್ಮಂಗೂಡಿ ಮಂಚಾಗ್ರದೊಳೊರಗಿರೆನುತತ್ಮಾಳಿಯಂಸಂತವಿಟ್ಟಾ
ಮನದಾಣ್ಮಂಗೂಡಿ ರತ್ಯಂತದೆ ಸುಖವಡೆದೈತಪ್ಪುರ್ದುಂ ಪಾಣ್ಬೆ ತತ್ಕಾಂ ||
ತನೊಳತ್ತಲ್ಕೂಡಿ ಸೌಖ್ಯಂಬಡೆದಿದಿರ್ದರೆ ತದ್ಭೂತಿಯೋರೊರ್ವರೊಳ್ತ |
ವ್ಮನಿತುಂ ವೃತ್ತಾಂತಮಂ ಕೇಳ್ದು ಹಹಯೆನುತೆ ಕೈವೊಯ್ದು ನಕ್ಕಾಡುತಿರ್ದರ್

ವಚನ|| ಮತ್ತಮೊಂದು ಸಂಕೇತನಿಲಯದಲ್ಲಿ—

ವೃ|| ಬಿಡುಬಿಡು ಕೋಳಿಕೂಗಿಪುದೆಮ್ಮವರೇಳ್ವರೆನುತ್ತೆ ಬಲ್ಪಿನಿಂ |
ಬಿಡಿಸಿಕೊಳುತ್ತೆ ಸಂವರಿಸಿ ನೀವಿಯನೊಳ್ಪುಡೆಯುಟ್ಟು ಬೀದಿಯೊಳ್ ||
ನಡೆವೆಳೆಜೋಡೆ ಮೂಡಗಡೆಗೆಂಪನಭೀಕ್ಷಿಸಿ ಭೀತಿವಟ್ಟು ಕ |
ಣ್ಗೆಡುತೆ ದವಾಗ್ನಿಗಂಡೆರಲೆಯಂತೆರ್ದೆ* ಪವ್ವನೆ ಪಾರೆ ಪಾರಿದಳ್ || ೧೧

ಕಂ|| ಜವದಿಸುಷಃಕಾಲವೃಷಂ |
ತವೆ ಕದಡಿದುದೆನಿಸಿ ಮಬ್ಬುರ್ವೆಳಗಂ ತಿಳಿದೊ ||
ಪ್ಪುವ್ ಬಾಂಗೆರೆಯೊಳ್ಮೀಂಗೆ |
ಳ್ತವಕದೊಳೆ ಮುಳುಂಗುವಂತಡಂಗಿದುವಾಗಳ್ || ೧೨

ಬೆಳ್ವೆಳಗಿನ ಬಾಳ್ವೆಳೆಯುಂ |
ತಳ್ವದೆ ಬಾಂಬೊಲದೊಳರುಣಕರಶಿಖಿಶಿಖೆ ಪಾ ||
ಳೇಳ್ವಿಸಮುಳುರ್ದಿ*ರೆ ಚಿಂತೆಯ |
ನಾಳ್ವಂತೆ ವೊಲೋಷಧೀಶ್ವರಂ ಕಳೆಗೆಟ್ಟಂ || ೧೩

ರಾಜಬಲಂ ಕುಂದಿದುದೆನ |
ಗೀಜಲಜಿನಿ ರಾಜಹಂಸಯುತೆ ಮಧುಪರವ ||
ವ್ಯಾಜದೆ ನಕ್ಕಪಳೆಂದಾ |
ರಾಜಿತ ಕುಮುದಿನಿ ವಿಷಾದದಿಂ ಕೊರಗಿರ್ದಳ್ || ೧೪

ವಚನ|| ಅಂತುಮಲ್ಲದೆಯುಂ—

ಕಂ|| ಮೊದಲೆನ್ನ ಸಿರಿಯನಿದು ನೋ |
ಡದೆ ಕಣ್ಮುಚ್ಚಿದುದುಗಡ ಸರೋಜಿನಿ ಸಿರಿವೆ ||
ತ್ತಿದನಿಂದು ನೋಡೆನಾನೆನು |
ತದು ಕಣ್ಮುಚ್ಚಿದವೊಲಲ್ಲಿ ಮುಗಿದುದು ಕುಮುದಂ || ೧೫

ವಿಧುವಿರಹಿಣಿ ನವಕುಮುದಿನಿ |
ಮಧುಮಿತ್ರ ನಿರೂಪಣಾತಿಭೀಕರವಿಚರ ||
ನ್ಮಧುಕರಮರಾಳದರ್ಶನ |
ವಿಧುರಿತೆ ಸುಗಿದಂತೆ ಮುಗಿದುದಸಿತಾಂಭೋಜಂ || ೧೬

ವೃ|| ಪರಿಪರಿದೊಂದನೊಂದರಸಿ ಕಂಡತಿಕಾತರಮುಣ್ಮೆ ಪೊಣ್ಮೆ ಬಂ |
ದೆರವಿನಿತಿಲ್ಲದಪ್ಪಿ ಗರಿ ನೆಟ್ಟನೆ ತಳ್ತಿರೆ ಕಣ್ಣುಬಾಶ್ರುವಂ ||
ಸುರಿಯೆ ಕಡಂಗಿ ಕಂಜದಳತಳ್ಪದೊಳೊಂದುವ ಚಕ್ರಚಕ್ರದ |
ಬ್ಬರದ ರತಕ್ಕೆ ನಾಣ್ಚುತಲರ್ಗಣ್ಮುಗಿದಂದದೆನ್ಸೈದಿಲೊಪ್ಪುಗುಂ || ೧೭

ಕಂ|| ಇರುಳತನುಧನುರ್ಲತೆಗೊ |
ಳ್ದಿರುವಾಗಿ ಬಳಲ್ದು ಪಸಿದಳಿವ್ರಜಕನಿಲಂ ||
ಪರಿಮಳದುಣಿಸಾಗಿಸಲಾ |
ದರಿಸಿ ಕರಂ ಬಿಚ್ಚಿರ್ದಂತಿರಲರ್ದುದು ನಳಿನಂ || ೧೮

ವಚನ|| ಅಂತುಮಲ್ಲದೆಯುಂ—

ಕಂ|| ಎನಗಾಗ[illegible]ಸರುಹಮುಂ |
ಮನೆಮಾಡಿದಳೆಂದು ಕಂಡು ಮುಳಿವಂ ಶಶಿಯೆಂ ||
ದೆನುತಿರುಳೆ ಮುಚ್ಚಿ ಸಿರಿಯಾ |
ತನಭಾವದೆ ಬಿಚ್ಚಿರ್ದಂತಿರಲರ್ದುದು ಕಮಳಂ || ೧೯

ಇರುಳಹಿತೇಂದೀವರದ |
ಲ್ಲಿರುತದು ಮುನಿದೊಡೆ ಮಧುವ್ರತಂ ಬರೆ ಮೊದಲಂ ||
ತಿರೆ ಕಂಡುದುಗಡ ಕಮಳಂ |
ಪರೀಕ್ಷಿಸಗ್ಗುಣಿಗಳಾಶ್ರಿತರೊಳವಗುಣಮುಂ || ೨೦

ಕನಕಕರಂಡಕದಿಂದಂ |
ದಿನಲಕ್ಷ್ಮಿ ಸರಾಗಮಿಂದ್ರನೀಲದ ಸರಮುಂ ||
ದಿನಪಂಗೀಯಲ್ತೆಗೆದಪ |
ಳೆನೆ ಮಧುಕರಮಾಲೆ ನಳಿನದಿಂ ನೆಗೆದೆಸೆಗುಂ || ೨೧

ಜಳಕಣಕಲಿತದಳಂ ನೀ |
ರ್ದಳಿದಿಟ್ಟೆಲೆಯಾಗೆ ನಳಿನಿ ಕೆಲದಟ್ಟೆಗಳಿ ||

ಟ್ಟಳೆನಿಸೆ ವಿಕಚಾಬ್ಜಂಗ |
ಳ್ಕೊಳನೆಸೆದುದು ರಾಜಹಂಸನೌತಣದೆಡೆವೋಲ್ || ೨೨

ಪಾಡುವಪರಮೆಗಳಿಂದೊ |
ಅಲ್ಲಾಡುವಮುದ್ದಂಚೆವರಿಗಳಿಂ ನರುಗಂಪಿಂ ||
ತೀಡುವೆಳಗಾಳಿಯಿಂ ಸಿರಿ |
ಗೂಡಿದಗೃಹದಂತಿರಿರ್ದ್ದು*ದಲರ್ದಂಭೋಜಂ || ೨೩

ತೀರದೊಳಿರೆ ವಿದ್ರುಮತತಿ |
ವಾರಿಯೊಳಿರೆ ಪದ್ಮರಾಗ ಮಬ್ಜಾಕರ ಮಾ ||
ನೀರಾಕರಮೆನೆ ಕಣ್ಗೇಂ |
ರಾರಾಜಿಸಿದುದೊ ಸಿತಾಬ್ಜಮುಕ್ತಾಳಿಗಳಿಂ || ೨೪

ಸುರವರಕರಿ ಮುರಿದೊಟ್ಟಿದ |
ಸುರುಚಿರ ನಂದನ ರಸಾಲಪಲ್ಲವತತಿಯಂ ||
ತಿರೆ ಕರಮೆಸೆದುದು ಮೂಡಣ |
ಗಿರಿ ಯೆಡೆಯೊಳ್ಮೂಡಿ ತೋ[illegible]ಂಧ್ಯಾರಾಗಂ || ೨೫

ವಚನ || ಮತ್ತಂ—

ಕಂ|| ಸುರವರನಂದನ ವನಮುಂ |
ಸುರವರನಂದನನ ಬಾಣದುರಿ ಪರ್ವ್ವಿದುದೀ ||
ಪರಿಯೆಂದರಿವುವ ತೆರದಿಂ |
ಪರಿರಂಜಿಸುತಿರ್ದ್ದುದುದಯ ಸಂಧ್ಯಾರಾಗಂ || ೨೬

ಹರಿದಿಕ್ಪಣವಧು ಬರೆ ಹಿಮ |
ಕರಖರಕರರೊಂದೆ ತೆರದೊಳನುರಕ್ತತೆಯಿಂ ||
ನೆರೆವಳ್ಗಡ ವಸುವಿತ್ತೊಡೆ |
ಸರಿ ಮೃದುಕರಿನರ್ಕ್ಕಳಿರ್ವ್ವರುಂ ಗಣಿಕೆಯರೊಳ್ || ೨೭

ಹರಿಗೆ ಮಣಿವ ಸುರನಿಕರದ |
ಕಿರೀಟಮೊರಸಿದೊಡೆ ಸುರಿವ ಕನಕದ ರಜಮಂ ||
ಸುರಕರಿ ಕರದಿಂ ಕೆದರ್ದಂ |
ತಿರೆ ಪಸರಿಸುತಿರ್ದ್ದುದುದಿತಖರಕರಕಿರಣಂ || ೨೮

ವೃ॥ ಬಿರಿಯೆ ಮೃದುಸರೋಜಂ ಬಿಂಕವಂ ಬಿಟ್ಟುರಾಜಂ |
ಜರಿಯೆ ತಿಮಿರಪೂಗಂ ಜಾರೆ ಜಾರಾನುರಾಗಂ ||
ಸರಿಯೆ ಕುಮುದಬೃಂದಂ ಸಂಮುದಂಗುಂದೆ ಬಂದಂ |
ನೆರೆಯೆ ಪಟುರಥಾಂಗಂ ನಿರ್ಮಳಾಂಗಂ ಪತಂಗಂ || ೨೯

ವಚನ|| ಮತ್ತಮಾಗಳ್—

ಕಂ|| ಪರಿಕಲಿತಾರುಣಕರ ಭಾ |
ಸ್ಕರಬಿಂಬಂ ಕಣ್ಗೆವಂದುದೈಂದ್ರೀವಧು ನು ||
ಣ್ಗೊರಲೊಳ್ಕಟ್ಟಿದ ಮಾಣಿಕ |
ವರಲೊಂದಿದ್ದೆರ್ದರದಾಳಿಯೆನೆ ರಶ್ಮಿಯುತಂ || ೩೦

ವಚನ|| ಮತ್ತಂ—

ಕಂ|| ಪರಿರಕ್ತದಿವಾಕರ ಭಾ |
ಸುರಬಿಂಬಮುದಿಂಬು ವಡೆದು ದಖಿಳ ದಿಶಾವಿ ||
ಸ್ಫುರಿತ ಸುಧಾಕರ ಕರಸಾ |
ಗೆರಮಂ [illegible]ಡರ್ವ ಬಡಬಶಿಖಿ ಪಿಂಡದವೋಲ್ || ೩೧

ಕೆಂಬೆಳ[illegible]ಸೆದುದು ಕೌಸುಂ |
ಭಾಂಬರ ಕೃತತಲ್ಪದಂತೆ ಖರರುಚಿ ಬಿಂಬಂ |
ಕೆಂಬಟ್ಟೆಯ ಪೊಸಕೌಳುಡೆ |
ಯೆಂಬಂತಿರೆ ತಳ್ತು ಮೆರೆದುದೈಂದ್ರೀವಧುವಾ || ೩೨

ವಚನ|| ಅನಂತರಂ—

ಕಂ|| ಕೆಂಬಟ್ಟೆಯ ಗವಸಣಿಗೆಯ |
ನಂಬರರಮೆ ನೋಡಲುಗಿದಮಣಿಗನ್ನಡಿಯಂ ||
ದೆಂಬಂತೆ ಸಂಜೆ ತೊಲಗಿ |
ದ್ದರ್ಂಬರಮಣಿಬಿಂಬಮೇಂ ಮನಂಗೊಳಿಸಿದುದೋ || ೩೩

ಇದು ಚಂಚದ್ವ್ಯೋಮಲಕ್ಷ್ಮೀಕರಕಲಿತಸುವರ್ಣಾಬ್ಜಮೋ ನೋಡು ನೋಡಿಂ|
ತಿದು ಪೂರ್ವಾಶಾಂಗನಾಮಂಗಳಮಧುರಿಮಸೀಮಂತಮಾಣಿಕ್ಯಮೋ ಪೇಳ್
ಇದು ಶಕ್ರಾಶಾದ್ರಿಹಮ್ರ್ಯೋಜ್ಜ್ವಳ ಕಳಶಮೋ ತಾನೆಂಬಿನಂ ಕಣ್ಗೆ ಚೆಲ್ವಾ |
ದುದು ಚಂಚದ್ದ್ವೃಕ್ಕದಂಬಂ ತಿಮಿರಕುಧರಶಂಬಂ ದಿನಾಧೀಶಬಿಂಬಂ || ೩೪

ವಚನ|| ಆಗಳ್—

ವೃ|| ವನನಿಧಿವಾರಿಯೊಳ್ಪೆರಸಿ ತೀವಿದಚಂದ್ರಿಕೆಯೆಂಬ ಪಾಲನೀ |
ಕನಕಸರೋಜರಾಜಿತರಜಃ ಪರಿಪಿಂಜರವರ್ಣಹಂಸನೊ ||
ಯ್ಯನೆ ಬರೆಪೀದ್ದುದಾ ಜಲಮನೊಲ್ಲದೆ ಬೇರ್ಪಡಿಸುತ್ತು ನೋಡಿಮೆಂ |
ಬಿನಮಿಳೆ ಮುನ್ನಜೊನ್ನಮದು ಪಿಂಗಿರೆ ತಗ್ಗಿತು ವಾರಿವಾರ್ಧಿಯಂ || ೩೫

ಮನದನುರಾಗದಿಂ ನೆರೆದು ನಲ್ಲಳೊಳುಣ್ಮುವ ಘರ್ಮವಾರಿಯೆಂ |
ದೆನೆ ಪನಿ ತೋರೆ ತೊಟ್ಟನಲ*ರ್ದಂಬುಜದೊಳ್ನೆಲೆಗೊಂಡು ಮೂಡಿ ಬ |
ರ್ಪಿನನ ಕರಂಗಳಂಗದೊಳೆ ಕುಂಕುಮದಂತಿರೆ ತೋರ್ಪಚಕ್ರಮೇಂ |
ನೆನೆಯಿಸಿದತ್ತೊ ಕಾಮಿನಿಯ ಬಲ್ಮೊಲೆ ಕಾಂತನ ಕಯ್ಯೊಳಿರ್ಪುದಂ || ೩೬

ಎರಲಿರದೆತ್ತಿ ಸೂಸೆ ಕನಕಾಬ್ಜರಜಂ ನಯದಿಂದೆ ಬರ್ಪನೀ |
ಳ್ದರೆಗೆರೆಗೊಂಡು ನಿಂದು ಸರಮೆಂಬಕಷೋಪಲದಲ್ಲಿ ವಾಸರೇ ||
ಶ್ವರಕರಮೆಂಬ ಪೊನ್ನೊರೆವೊಲೊಪ್ಪಿರೆ ಸೌರಭಕಲ್ಲಿ ಸಾರ್ದುಷ |
ಟ್ಚರಣಮೆ ಕಾಲಕಾರುಕನಮುಚ್ಚಿದ ಮೇಣದವೋಲ್ವಿರಾಜಿಕುಂ || ೩೭

ಮೃಗಧರ ಬಿಂಬಮೆಂಬ ಪೊಸಬೆಳ್ಮುಗಿಲುವ [illegible]ಯಲ್ಲಿ ಸೂಸೆ ಸೋ |
ಜಿಗಮೆನೆ ಚಂದ್ರಿಕಾಮೃತದ ಬಲ್ಸರಿಯಂ ಕ[illegible]ಕರಾಬ್ಜಶು ||
ಕ್ತಿಗಳದರಚ್ಛಬಿಂದುಗಳನಾಂತೊಳಗಾಗೆಳೆ ಮುಚ್ಚಿಕೊಂಡೊಡ |
ಲ್ಲೊಗೆದುರುಮೌಕ್ತಿಕಂಗಳೆನೆ ಕಂಗೊಳಿಸಿರ್ದುವು ವಂಚೆದತ್ತಿಗಳ್ || ೩೮

ಖರಕರಸಿದ್ಧನೆಳ್ದು ದಿವಿಜೇಂದ್ರದಿಶಾದ್ರಿಗುಹಾನಿವಾಸದಿಂ |
ದುರುತಿಮಿರಾಭಿಭೂತಭುವನೋನ್ನತಲೋಹಕೆ ತನ್ನವಿದ್ಯೆಯಂ ||
ಧರೆಗರಿಪಲ್ಕೆ ಮುಟ್ಟಿಸೆ ಕರೋತ್ಕರಸಿದ್ಧರಸಪ್ರವಾಹಮಂ |
ಪಿರಿದದು ಚಿನ್ನಮಾದುದೆನೆ ಪೊಂಬಿಸಿಲೊಂದಿರೆ ಕಣ್ಗೆ ರಂಜಿಕುಂ || ೩೯

ವಚನ|| ಮತ್ತಮದಲ್ಲದೆಯುಂ ಮತಿವಿಶದಶಶಿಮಣಿಮಯ ಶಿವಗೃಹೋಪರಿಮಶಿಖರಾಗ್ರದೊಳ್ಕೆತ್ತಿಸಿದ ಮುತ್ತುಗಳೆಂಬಂತೆ ನಿಲುಂಬಿ ನಿಂದಹಿಮಕರಕರ ಪಾತಜನಿತಹಿಮಕಣೋತ್ಕರಮಂ ಪೊಸಬೆಸನದಿಂ ನಸೆಮಸಗೆ ಸುಸಿಲೆಸಗಿ ಬಳಲ್ದುಬಾಯಾರಿ ಬಳಸಿನಿಂದು ಕರ್ದುಂಕುವ ತರುಣಪಾರಾವತಂಗಳ ರತೆಯಂ ಬರಿಕೈವಂತೆ ತೊಳೆದು ಕಳೆದು ಗವಾಕ್ಷವಿವರದೊಳೊಳಪೊಕ್ಕು ಪೊಚ್ಚಪೊಸಪೊಂಡಗಡನಮುಚ್ಚಿದಂ ತೊಳವಳಯದ ಭಿತ್ತಿಯಂ ನೆಮ್ಮಿ ಬೆಳಗಿಯುಂ | ಕಳೆಗುಂದಿದ ಕಳಾಧರನಂ ಕಂಡು ನಸುನಗುವಂತಲರ್ದಕೆಸಮ್ಮಲ್ಲಿಗೆಯ ಕಿತ್ತಸಳ ಕೇಸರದ ಕುಸುಂಕರೊಳ್ಮಸುಂಕಿ ಮುಸುಂಬನಿಟ್ಟು ಪಸಿವಡಂಗೆ ಪೊಸಬಂಡನುಂಡು ಪಿಂಡುಗೊಂಡು ಮಂಡಳಿಸಿ ನಿಂದಪೆಣ್ದುಂಬಿಗಳಂ ಪೊಂದುಂಬಿಗಳೆಂಬಂದಮನೊಂದೆ ನಿಮಿಚ್ಚಿ

ಯುಂ | ಕಂದರ್ಪಕಲಹಕ್ಕೆ ಕಟ್ಟಾಳ್ತನಂಬೆತ್ತು ಗಳಿಲನಿದಿರ್ಚಿ ನಿಂದು ನಳಿನ ದಳಮೆಂಬ ಕಳದೊಳ್ಪ್ರತಿಕಲಹಕ್ಕೆಳಸಿ ಕೈವಾರಿ ಪಳಂಚಿ ಕಡಂಗಿ ಕಾದಿ ಕಡುಗಲಿತನಂ ಮಿಕ್ಕ ಜಕ್ಕವಕ್ಕಿಗಳ್ಗೆ ಮೆಚ್ಚಿ ಪಚ್ಚೆವಿಲ್ಲಂ ಪೊದಿಸಿದ ಪೊಂಬಟ್ಟೆಯೆಂಬ ಪಾಂಗನೊಡನಳುರ್ಕೆ ಗೊಂಡೊಡರ್ಚಿಯುಂ | ಕಡುಬೆಳೆದು ತಳಿರ್ತ ತರುಣತಮಾಲ ದೆಳದಳಿರ ನಳುರ್ದು ಪಿಕನಿಕರಕೆ ಮಾಂದಳಿರೆಂಬ ಸಂದೆಗಮಂ ಮಾಡಿ ಕರ್ದುಂಕಿಸಿಯುಂ | ತೋಡಿಲ್ಲದ ಫಲಿತರಸಾಲ ಮೂಲದಾಲವಾಲದೊಳ್ಲೀಲೆಯಿಂ ರತಿಯುವತಿ ಸುರಿದಕುಂದಣದ ಕುಂಭದ ಕುಂಕುಮಾಂಬುವೆಂಬಶಂಕೆಯಂ ಭೋಂಕನೊಡರ್ಚುತಲೆದುರುಗಲ ಪೊದರ ಪೊರೆಯೊಳ್ಮೃಗೆರೆದ ಕಡುಗಳ್ತಲೆಯ ನೆಡೆನುಸುಳ್ದು ಪಿಡಿದೊರಸುತ್ತಲ್ಲಿ ಪರೆದು ಪಸರಿಸಿಯುಂ | ಮಿಸುಪಕರವೀರದ ಕಡುಗೊವ್ವಿರ್ದ ಬರಿಮುಗುಳ್ಗಳಂ ಮುಸುಕಿ ಮುತ್ತಿಮುಸುರಲೆಂದು ಮುಂಕೊಂಡು ಝೇಂಕರಿಸುತ್ತೆ ದುರುದುಂಬಿತನದಿಂಬಂದ ಮರಿದುಂಬಿಗೆ ಚಂಪಕಕೋರಕಭ್ರಾಂತಿ ಗೊಟ್ಟು ತೊಟ್ಟನೆ ಮುಗುಳ್ಚಿಯುಂ ನಿಧುವನ ನಿಕೇತನದ ವಾತಾಯನಂಗಳೊಳ್ನುಸುಳ್ದು ಸುಸಿಲ್ಗಡೆಯೊಳೊರಗಿರ್ದ ಸೊರ್ಕುಂಜವ್ವನೆಯರ ಕರ್ಕಶಸ್ತನಮೆಂಬ ಮದನ ಮದಗಜ ಕುಂಭಯುಗಳದ ಪಾರ್ಶ್ವದ್ವಯದೆ ತಳ್ತಿಳಿವ ಮದಕರ್ದಮದಂತೆ ಕಣ್ಗೆವಂದ ಕಕ್ಷಭವ ಘರ್ಮಜಲಲವಲುಲಿತ ಮೃಗಮದ ಕರ್ದಮಮಂ ನಾವರಿಸಿ ಕಾಶ್ಮೀರ ಕರ್ದಮಮೆನಿಸಿ ರಂಜಿಸಿಯುಂ ರಾಜಮಂದಿರದ ಮುಂದೆ ನಿಂದುಗಂಧ[illegible]ಂಗಳಂಗಕ್ಕೆ ಸಂದಸಿಂದೂರಶ್ರೀಯು ನೋಲಗಿಸಿಯುಂ ಬಚ್ಚಬರಿಯಬಯ ಲೊಳ್ಮೊಕ್ಕಳಮೆನೆ ತೆಕ್ಕನೆ ತೀವಿ ಕಡಲುಡಿಗೆ ಗೊಂಡಪೊಡವಿವೆಣ್ಣಂಬ ರಾಂಬುಜನೇತ್ರನಿತ್ತ ಪೀತಾಂಬರದ ಜಳಂಬಮೆಂಬಬೆಡಂಗೆನಮರ್ಚಿಯುಂ ಪರಿವಪೆರ್ದೊರೆಗಳೊಳ್ಪರೆದು ಪಸರಿಸಿ ನಿಲುಂಬಿ ನೀರಾಟಮನಾಡಿ ಪೋದವಾರನಾರಿಯರ ಪೊಂಜೆಳೆಮೆಯ್ಯೊಳ್ ರಂಜಿಸಿರ್ದ ರಜನೀರಜಂಗಳಿಂ ಕದಡೇಳ್ದು ಪರಿದಪುದೆಂಬ ಪಿರಿಯಸಿರಿಯ ನೊಳಗು ಗೊಳಿಸಿ ಜಂಬೂನದೀಭ್ರಾಂತಿಯಂ ರತ್ನಾಕರಂ ಗೊದವಿಸಿಯುಂ ನಿದ್ರೆ ನೆಲೆಗೆಟ್ಟು ತೊಲಗೆ ನಿಜಾಲಯದಿಂ ಪೊರಮಟ್ಟು ಮತ್ತವಾರಣ ದೊಳ್ನಿಂದು ನಿರೀಕ್ಷಿಪ ಕಮಳದಳಧವಳಲೋಚನೆಯರ ಕಟಾಕ್ಷಛವಿಗಳೊಳ್ತೊಡರ್ದು ತದ್ವನ ವಿಧುಮಂಡಳ ಪ್ರಸಾರಿತ ಚಂದ್ರಿಕೆಯೊಳ್ಮಲ್ಲಗಾಳೆಗಮ ನೊಡರ್ಚುವಂತೆಕಮನೀಯತೆಯ ನಾಲಿಂಗಿಸಿಯು ಮತಿಸಾಂದ್ರತೆಯನಪ್ಪು ಕೈದೆಳನೇಸರಳವಿಗಳಿಡ ಕನಕರುಚಿರುಚಿರತರಕರನಿಕರಂಪರಿರಂಜಿಸಿಪರ್ಬಿಕಣ್ಗೊಪ್ಪುತ್ತುಮಿರ್ದುದಾಪ್ರಸ್ತಾವದೊಳ್

ವೃ|| ವಿಮಳಿನ ಚಂದ್ರಕಾಂತಿತನುತಂತುಗಳಂ ಮಿಗೆ ನುಂಗಿ ಪಿಂಗದಾ |
ಕ್ರಮಿಪ ಪತಂಗದಿಂದಗಿದು ಪೊಕ್ಕ ಸೆಲಂದಿವೊಲೊಪ್ಪೆ ಲಾಂಛನಂ ||
ಕಮಳಜಶಿಲ್ಪಿ ಕಲ್ಪಿತ ಜಗದ್ಗೃಹದಗ್ರದೊಳೊಪ್ಪಿದತ್ತುಚಂ |
ದ್ರಮನದ ರೊಂದು ಗೂಡೆಸೆ ನಿರೀಕ್ಷಣೆಗೀಕ್ಷಿಪ ಭೂಜನೌಘದಾ || ೪೦

ವಚನ|| ಆಗಳ್—

